ಗುಡಿಸಾಗರ

# ಶ್ರೀ ಸಿದ್ಧಸಾಧುಗಳ ಪುರಾಣ



ಲೇಖಕರು:

…ಜ್ಯ ಸದಾಶಿವಶಾಸ್ತ್ರಿಗಳು ವೇದಾಂತ
…ರ್ಯ ಶಿವಾನಂದ ಮಠ, ರೋಣ.



ಗುಡಿಸಾಗರ

ದಿ. ೧೯-೭-೧೯೭೦] [ಬೆಲೆ: ೨-೦೦

# ಶ್ರೀ ಸಿದ್ಧಸಾಧುಗಳ ಪುರಾಣ

B.M. Gudgeri
Rtd Tahsildar
26/10/72



ಲೇಖಕರು :

ಶ್ರೀ ಪೂಜ್ಯ ಸದಾಶಿವಶಾಸ್ತ್ರಿಗಳು ವೇದಾಂತ
ಆಚಾರ್ಯ ಶಿವಾನಂದ ಮಠ, ರೋಣ.



ಗುಡಿಸಾಗರ

ದಿ. ೧೯-೭-೧೯೭೦ ] [ ಬೆಲೆ: ೨-೦೦

# ಮೊದಲ ಮಾತು



ನಮ್ಮ ಈ ಉತ್ತರ ಕರ್ನಾಟಕ ಪ್ರದೇಶದಲ್ಲಿ ಮುಖ್ಯವಾಗಿ ಸಾಧು ಸಂತರು ಶರಣರು ಅಘಟಿತಘಟನಾಸಾಮರ್ಥ್ಯವುಳ್ಳ ಪವಾಡ ಪುರುಷರು ಆಗಿ ಹೋಗಿದ್ದಾರೆ ೧೯ನೇ ಶತಮಾನದ ಉತ್ತರಾರ್ಧದಲ್ಲಿ ೨೦ನೇ ಶತಮಾನದ ಪೂರ್ವಭಾಗದಲ್ಲಿ ಭಕ್ತಿ ವಿಶ್ವಾಸ ಹಾಗೂತತ್ತ್ವಜ್ಞಾನ ಉಳಿದುಕೊಂಡು ಹೋಗುವಂತೆ ಮಾಡಿದ ಮಹಾಪುರುಷರಲ್ಲಿ ಅಗ್ರಗಣ್ಯರಾದ ಗುಡಿಸಾಗರದ ಶ್ರೀ ಶಿದ್ಧ ಶಿವಯೋಗಿಗಳೂಒಬ್ಬರು. ಇವರು ಸದ್ಭಕ್ತರ ಹೃದಯ ಭೂಮಿಯಲ್ಲಿ ಭಕ್ತಿ ಬೀಜವನ್ನು ಬಿತ್ತಿ ಬಾಳಿಬೆಳಗಿ ಅಮರರಾಗಿಹೋದರು ಲಿಂಗಸೂರ ತಾಲೂಕಿನ ಭಾವಣಿಯಲ್ಲಿ ಅವತರಿಸಿದರು ಆಗ ಇಸ್ವಿಯು ೧೮ಳಳ ಇತ್ತು ಜ್ಞಾನದ ಪಿಪಾಸತೆಯಿಂದ ಬಳಲಿ ಬೆಂಡಾಗಿ ಶ್ರೀಗುರುರುದ್ರದೇವರು ಬನ್ನಟ್ಟಿ ಇವರಲ್ಲಿ ನೆಲಿಸಿ ತಿಳಿದುಕೊಂಡು ಮುಕ್ತರಾದರು ಭವದ ಬೇನೆಯಿಂದ ಬಳಲುವವರಿಗೆ ಮೋಕ್ಷದ ಮಾರ್ಗವನ್ನೂ ತನು ಬೇನೆಗಾರರಿಗೆ ಮಂತ್ರ ತಂತ್ರ ಔಷಧಗಳನ್ನಿತ್ತು ರಕ್ಷಿಸಿದರು ಕೇವಲ ಅನುಭವದಿಂದಲೇ ಪಾಕಶಾಸ್ತ್ರ ಷಡಷಟ್ ಪುರಾಣ ತಿದ್ದಿದ ದೇವಿ ಪುರಾಣಗಳನ್ನು ರಚಿಸಿ ೧೯೩೩ ರಲ್ಲಿ ರೋಣದಲ್ಲಿ ಲಿಂಗೈಕ್ಯರಾದರು ಇವರ ಚರಿತ್ರೆಯನ್ನು ಯಾರೂ ಇದುವರೆಗೂ ಬರೆಯಲಿಲ್ಲ ಆದರೆ ನಾಡಿನ ಭಾವೀಪೀಳಿಗಿಗೆ ದಾರಿದೀಪವಾಗಿ ಪರಿಣಮಿಸುವಂತೆ ಈ ಪುಣ್ಯ ಪುರುಷನ ಗಣ್ಯಜೀವನವನ್ನು ಪುರಾಣ ರೂಪದಲ್ಲಿ ಬರಿಸಬೇಕೆಂದು ಶ್ರೀ ಸಾಧು ಅಜ್ಜನವರ ಅನೇಕ ಕಡೆ ಮಾಡಿದ ಪವಾಡಗಳನ್ನು ಸಂಗ್ರಹಿಸಿ ತಂದು ಶ್ರೀ ಸದಾಶಿವ ಶಾಸ್ತ್ರಿಗಳ ಕೈಯಲ್ಲಿ ಕೊಟ್ಟೆನು. ಇವರು ಜನಸಾಮಾನ್ಯರಿಗೆ ತಿಳಿವಂತೆ ಬರಕೊಟ್ಟರು ಆ ವಿಷಯವನ್ನೇ ಹೊರಗೆಡವಲಾಗಿದೆ. ಆದುದರಿಂದ ಈ ಗ್ರಂಥವಿದ್ದರೆ ಮನೆಯಲ್ಲಿ ಶ್ರೀ ಸಾಧು ಅಜ್ಜನು ಇದ್ದಂತೆಯೆ ಕಾರಣ ಓದಿ ಜನ್ಮ ಸಾಫಲ್ಯಮಾಡಿಕೊಳ್ಳುವಿರೆಂದು ಆಶಿಸುವ.

ಬೆಳವಟಗಿ
ತಾ. ೨೨-೭-೧೯೭೦

ಶ್ರೀ B. M. ಗುಡಗೇರಿ
ರಿಟಾಯರ್ಡ ತಹಶೀಲದಾರ

# ಪ್ರಸ್ತಾವನೆ

ಮನುಷ್ಯಾಣಾಂ ಸಹಸ್ರೇಷು । ಕಶ್ಚಿದ್ಯತತಿ ಸಿದ್ಧಯೆ ।
ಯತತಾಮಪಿ ಸಿದ್ಧಾನಾಂ । ಕಶ್ಚಿನ್ಮಾಂ ವೇತ್ತಿ ತತ್ತ್ವತ ಃ

ಸಾವಿರಾರು ಜನರಿಗೆ ನಾನು ಅರ್ಥವಾಗುವದಿಲ್ಲ. ಎಲ್ಲೆಯೊ ಒಬ್ಬನಿಗೆ ಇರಲಿ ಈಗ ನಮ್ಮ ಕನ್ನಡ ನಾಡಾದ ಲಿಂಗಸೂರ ತಾಲೂಕಿನ ಛಾವಣಿಯೆಂಬ ಗ್ರಾಮದಲ್ಲಿ ೧೮೪೪ ನೇ ಇಸ್ವಿಯಲ್ಲಿ ಶ್ರೀಮದತ್ಯಾಶ್ರಮಿ ಗುಡಿಸಾಗರ ಸಿದ್ಧ ಸಾಧು ಶಿವಯೋಗಿಗಳು ಅವತರಿಸಿ ಬನಹಟ್ಟಿ ಶ್ರೀ ಸದ್ಗುರು ರುದ್ರಯ್ಯನವರಿಂದ ಮುಕ್ತರಾದುದು ಜನಜನಿತವಾಗಿದೆ. ಇವರ ಸುಜ್ಞಾನ ಯೋಗ ಜಪ ತಪ ಕಾರುಣ್ಯ ಪವಾಡ ಎಲ್ಲ ಭಕ್ತ ವರ್ಗಕ್ಕೆ ಪುರಾಣ ರೂಪದಿಂದ ಕೈಸೇರಲೆಂದು ಶ್ರೀ ಬಸಪ್ಪ ಮಲ್ಲಪ್ಪ ಗುಡಗೇರಿ ನಿವೃತ್ತ ತಹಶೀಲ್ದಾರ ಸಾಹೇಬರು ಧನದ ನೆರವಿತ್ತು, ಬಹಳ ಅನುಕೂಲಮಾಡಿಕೊಟ್ಟಿದ್ದಾರೆ ಇವರು ನವಲಗುಂದಕ್ಕೆ ಸೇರಿದ ಬೆಳವಟಗಿ ಗ್ರಾಮದವರು ೧೯೭೪ ನೇ ಇಸ್ವಿಯಲ್ಲಿ ಸಿದ್ಧಗಿರಿ ಮನೆತನ ದಲ್ಲಿ ಜನಿಸಿದವರು ಶುದ್ಧ ಕಾಯಕದಿಂದ ಸಿದ್ಧಿಯನ್ನು ಸಾಧಿಸಿಕೊಂಡ ಕನ್ನಡ ಮ್ಮನ ಪ್ರಿಯಪುತ್ರರು ಕೋಲಾಪೂರದಲ್ಲಿ ಬಿ. ಎ. ಪದವಿ ಪಡೆದು ಧಾರವಾಡ ಜಿಲ್ಲೆಯದ ರೆವ್ಹಿನ್ಯೂ ಖಾತೆಯಲ್ಲಿ ಸೇರಿ ಕಾರಕೂನರಾದರು ಮುಂದೆ ಸಿರಸ್ತೆ ದಾರ ನಂತರ ಮಾಮ್ಲೇದಾರರು ಮತ್ತು ನವಲಗುಂದದ ಶ್ರೀ ಶಂಕರ ಆರ್ಟ್ಸ್ ಕಾಲೇಜಿನ ಆಜೀವ ಸದಸ್ಯರಾಗಿರುವರು ಅಂದಮೇಲೆ ಉದಾರಬುದ್ಧಿಯವರಾದ ಇವರನ್ನು ಪರಮಾತ್ಮನೂ ಶ್ರೀ ಸಾಧು ಅಜ್ಜನೂ ಪೊರೆಯಲೆಂದು ಹಾರೈಸು ತ್ತೇವೆ. ಇದಲ್ಲದೆ ಸಕಾಲಕ್ಕೆ ಮುದ್ರಿಸಿಕೊಟ್ಟ ಶ್ರೀ ರವಿ ಪ್ರಿಂಟರ್ಸ ಇವರಿಗೂ ಅವರ ಸ್ಟಾಪದವರಿಗೂ ಚಿರಋಣಿಯಾಗಿದ್ದೇವೆ.

ಶ್ರೀ ಸದಾಶಿವಶಾಸ್ತ್ರಿಗಳು

# ಶ್ರೀ ಪೂಜ್ಯ. ದಿವಂಗತ ಗುಡಿಸಾಗರ ಸಿದ್ಧ ಶಿವಯೋಗಿಗಳು.







ಪುರಾಣ ರಚಿಸಿದವರು



ಶ್ರೀ ಪೂಜ್ಯ ಸದಾಶಿವ ಶಾಸ್ತ್ರಿ
ಗಳು ವೇದಾಂತ ಆಚಾರ್ಯ
ಶಿವಾನಂದ ಮಠ ರೋಣ.

ಶ್ರೀ ಸಿದ್ಧ ಶಿವ ಯೋಗಿಗಳ ಪುರಾಣಕ್ಕೆ
ವಿಷಯ ಸಂಗ್ರಹಿಸಿ ಕೊಟ್ಟವರು ಹಾಗೂ
ಧನ ಸಹಾಯಕರು.



ಶ್ರೀ ಬಿ. ಎಮ್. ಗುಡಗೇರಿ.
ರಿಟಾಯರ್ಡ ತಹಶೀಲದಾರ.
ಬೆಳವಟಗಿ.

# ಪರಿವಿಡಿ

॥ ಶ್ರೀ ಗುರು ರುದ್ರದೇವ ಪ್ರಸನ್ನ ಃ ॥

# ಮಂಗಳಾಚರಣ ಪ್ರಾರಂಭಃ

## ಭಾಮಿನೀಷಟ್ಪದಿ

**ಸೂಚನೆ :**

ಶ್ರೀಕರಂ ಸಂಸಾರ ತಮಸ ವಿ ।
ಭಾಕರಂ ಗಂಭೀರ ಗಣಕಂ ।
ಪಾಕ ರಸಿಕಂ ಕುಡುಗೆ ಗುಡಿಸಾಗರದ ಯತಿ ಯಶಮಂ ॥ ಪಲ್ಲ ॥

ರವಿಯ ವೋಲ್ ತಾಂ ಸಾಕ್ಷಿ ಕರ್ಮಕೆ !
ಭವಕೆ ಮಿಗೆ ದಾವಾಗ್ನಿ ಮಾಯೆಗೆ ।
ನವೆಯದಾ ಮಾ ವೀರಪತಿ ಸುಖದುಃಖವೆರಡಕ್ಕೆ ॥
ಅವನತಾಗದ ಶಿಲೆಯು ಮನಸಿನ ।
ಹವಣಿಕೆಗೆ ಸಲೆ ನಿಲುಕದಾ ನಭ ।
ಪವಣರಿಯಬಿಂಥಿರವಿಗೆರಗುವೆ ಮನಕೆ ಸಾಲ್ವಿನೆಗಂ ॥ ೧ ॥

ಲಿಂಗಮಂಪೂಜಿಪುದುಕಂಡೊಡ ।
ನಂಗದೋಳುರಿಗೊಂಡು ರವಿಸುತ ।
ತುಂಗಮಾರ್ಕಂಡೀಶ್ವರನಿಗಂ ಪಾಶಮಂ ಬೀರೆ ॥
ಕಂಗಳಿಂದದ ಕಾಂಬುತಾಗಳ್ !
ಲಿಂಗದಿಂದುದ್ಭವಿಸುತವನಸು ।
ಭಂಗಮಂ ಗೈಯ್ದಾ ಶಿವಾಧವ ಸಲುಹಲೆಮ್ಮುವನು ॥ ೨ ॥

ಜಾಣೆ ಕೈಲಾಸಾಧಿಪತಿಯಾ ।
ರಾಣಿ ಪರುಷದಸಾಣಿ ಭಕ್ತಾ ।
ಧೀನಿ ಪಾವನ ಚರಣಿಯಂತಃಕರುಣಿ ಶುಭವಾಣಿ ॥
ನೀನು ನಿನ್ನಯ ಮಾಣಿಯಂತೆ ಸ ।
ಹಾನುಭೂತಿಯನೆಮಗೆ ತೋರ್ಪುತ ।
ಮಾನಿರತ್ಯಯಮಂ ನಿಲುಂಕಿಸಿ ಪೊರೆಯೆ ಜಗದಂಬೆ ॥ ೩ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರ ಶ್ರೀಮದ
ತ್ಯಾಶ್ರಮಿೂ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ಸಲೆ ಪೀಠಿಕಾ ಸಂಧಿಯು ಮುಗಿದುದು ॥

— ಶುಭಂ —

ಒಟ್ಟು ನುಡಿಗಳು ೧೧.



# ೧ನೇ ಅಧ್ಯಾಯ

**ಸೂಚನೆ :**

ಮುದದಿ ನರರಂ ಕಾಪಿಡುವಕಂ ।
ಸದಮಲನು ಗುಡಿಸಾಗರೀಶನು ।
ಮುದಯಿಸಿದ ನಾಗಮ್ಮನಲಿ ಛಾವಣಿಯ ಗ್ರಾಮದೊಳು ॥ ಪಲ್ಲ ॥

ಗುರವೆ ಸಿರಿಯನು ಸಕಲರೊಳಗೆಂ ।
ದರಿದು ನಿನ್ನಯ ಪೂಜ್ಯ ಪದಮಂ ।
ಶಿರದಿ ಧರಿಸುತಮೆನ್ನ ತನುವಂ ಪುನಿತಮಂಮಾಡಿ ।
ಅರಪು ಬ್ರಹ್ಮವನೆಂದು ಸಂತತ ।
ಮೊರಲುತಿರ್ಪೆಂ ಸಿದ್ಧಯೋಗಿಯೆ ।
ತ್ವರಿತದಿಂದ್ವೈತಂದು ಬೋಧಿಸಿ ರಕ್ಷಿಸೊಲವರ್ದು ॥ ೧ ॥

ಎಲ್ಲ ಪುನಿತ ಪುರಾಣದೊಳಗಿದು ।
ಕಲ್ಲು ಸಕ್ಕರಿಯಂತೆ ಸವಿಯಂ ।
ಸಲ್ಲಿಸುತ್ತಿಹುದೆಂದುಮಾಲ್ಪರಿದೆಲ್ಲರುಂ ಕೇಳ್ದು ।
ಅಲ್ಲಗಳೆದೀ ಪೊಲ್ಲ ಭವಮಂ ।
ಚೆಲ್ವತರದವಬೋಧಮಂ ತಿಳಿ ।
ದುಲ್ಲಸದಿ ಮೆರೆಯುತಿಹರುಂ ತನ್ಮೊಳಗೆ ತಾವಾಗಿ ॥ ೨ ॥

ಶಿವಶಿವೆಯರೊಂದು ದಿವಸದೊಳಂ
ವಿವಿಧ ವಿಷಯದ ವಾರ್ತೆಯಂ ನುಡಿ ।
ದವಿರತಾನಂದದೊಳು ಕೈಲಾಸದಲಿ ಮಂಡಿಸಿರೆ ॥
ಜವದಿಯಲ್ಲಿಗೆ ನಾರದಂ ಜಗ ।
ದವಗಡವನುಂ ತಿಳುಪ ಬೇಕೆಂ ।
ದವಚಿ ವೀಣೆಯ ಪಿಡಿದುಮಾಗಮಿಸಿದನು ಕಾತರಿಸಿ ॥ ೩ ॥

ವೀಣೆಯಂ ಬದಿಗಿಟ್ಟು ಪರಮುಗ ।
ಮಾನತನು ತಾನಾಗಿ ಪೇಳ್ದಂ ।
ಕ್ಷೋಣಿಯೊಳಗೀ ಕಾಯಮಂ ನೆರೆ ನಂಬಿ ಜೀವಿಗಳು ॥
ಹಾನಿಯಂ ಪೊಂದಿದೊಡುಮರಿಯದೆ ।
ಶ್ವಾನನಂದದಿ ಮೋಹಮಂ ಗೈ ।
ದಾನುಪೂರ್ವಿಕ ಮಾರ್ಗಮಂ ತೀಡುವರು ಮನಮೆಚ್ಚಿ ॥ ೪ ॥

ಮಾತಿನೊಳು ಮಾತಿಲ್ಲಮೊಬ್ಬರ ।
ಮಾತನುಂ ಲಾಲಿಪುದುಮದರೊಲು ।
ಸಾತಿಶಯ ಸಂಪ್ರೀತಿಯಿಂ ನಡೆಯುವದು ಮೊದಲಿಲ್ಲ ॥
ತಾತನಂ ತಾತ್ಸಾರ ಮಾಡುತೆ ।
ಸೋತು ತಮ್ಮ ತಳೋದರಿಯ ಬಳಿ ।
ಗೀತಮಂ ಪಾಡುವರು ಶಿಷ್ಟಾಚಾರಮಂ ನಿಗುಳ್ಚಿ ॥ ೫ ॥

ಗುರುಗಳಂ ಲೆಕ್ಕಿಸರು ಶ್ರುತಿಯಂ ।
ಜರೆದು ವಿಪ್ಲವ ವೃತ್ತಿಯಂ ಬಲು ।
ಬೆರಸಿ ಕೊಲೆ ಸುಲಿಗೆಯನು ಮಾಳ್ಪರುಮಾರಿಗಳುಕದಲೆ ॥
ಅರಿಯದಿಹರೀ ನಾನು ನೀನೆಂ ।
ಬುರೆ ವಿಚಾರಮುಮಂ ಬಿಡದಿಹರು ।
ವಿರಸೆನಿಪ ವಾಗ್ವಾದಮಂ ಕೆಡಿಸುವರು ಪರಮಧುವ ॥ ೬ ॥

ಸತಿಯ ಸಂಗಡ ಕಲಹಮಂ ಗುರು ।
ಜೊತೆಗೆ ಬಿರುಬಿನ ಕಲಹಮಂ ಸ ।
ತ್ಯತಿಗರೊಡನೆಯು ಕಲಹಮಂ ಸೋದರೊಳು ಕಲಹಮುಮಂ ।
ಅತಿಶಯಿಸಿ ಮಾಡುತ್ತಮೆಲ್ಲರ ।
ಕುತಿಗೆಯಂ ಮುರಿಯುತ್ತೆ ಪರಿಚಯ ।
ವತರುಮಿರ್ದೊಡು ಮಾತನಾಡಿಸರಾತುರಂಬಟ್ಟು ॥ ೭ ॥

ಕೆಲರು ಜನಿವೃತಿ ಕಂಡು ಕೆಲವರು ।
ಬಳಲಿಸುವ ಲೊಳಲೊಟ್ಟಿಸಂಸೃತಿ ।
ತಳಹದಿಯನಾವ್‌ಕಾಣಬೇಕೆಂತೆಂದು ತಳಮಳಿಸಿ ॥
ಅಲೆಯುತಿಲ್ಲೆಡೆ ಸಿಗದೆ ನಿನ್ನನು ।
ಮಲವರಲಿ ಕರೆಯುವರು ಶಿವನೇ ।
ನಿಲದೆನೀನತ್ತೈದಿ ತವ ಹೆಗಲೊಡ್ಡಿ ಪೊರೆ ಯವರ ॥ ೮ ॥

ಇಂತೊರೆದುದಂ ಚಿತ್ತಯಿಸಿ ಹರ ।
ನಂತರಂಗದಿ ಮರುಗಿ ಮುನಿಯುಂ ।
ಪಿಂತಿನಿಂತಾಂ ಕಳುಪಿ ಸರ್ವಮುಮುಕ್ಷು ರಕ್ಷಣೆಗೆ ॥
ಅಂತರಿಸದಾಲೋಚಿಸುತ್ತಲಿ ।
ಸ್ವಂತ ತಾನೇ ತನ್ನಬಲದಿಂ ।
ಪಂಥಮಂತೋರ್ಪುದಕ ಮಾನರ ಕಾಯಮಂಧರಿಸಿ ॥ ೯ ॥

ಆಗ ಕನ್ನಡ ದೇಶದಲಿ ಸುಖ ।
ದಾಗರೆಂದೆನಿಸುತ್ತಜಸ್ರಂ ।
ಬೀಗಿ ಮಿಗೆ ಮೆರೆಯುತ್ತಲಿಹ ರಾಯ್‌ಚೂರ ಜಿಲ್ಹೆಯದ ॥
ಭೋಗಮಯದಾ ಲಿಂಗಸೂರಿನ ।
ಭಾಗದೋಳಹ ಛಾವಣಿಯೊಳಂ ।
ಯೋಗ್ಯವೆಂದೆನ್ನಿಸುವ ರಂಗಾರಿಯರ ಕುಲದೊಳಗೆ ॥ ೧೦ ॥

ಖ್ಯಾತ ಶಿವಪೂಜಾಧುರಂಧರ ।
ನಾಥ ರಾಗಿಯು ಕನಲು ರಹಿತಂ ।
ಭೂತ ದಯಮಂಪಿಡಿದ ನಿಃಶ್ರೇಯಸನಿರಾಕುಲನು ॥
ನೀತಿಯನುಮೋದಿಪ ವಿಧಾಯಕ ।
ಪೂತತತ್ತ್ವವಿಚಾರವತ ಶಿವ ।
ದೂತನಾದ ಗೃಹಸ್ಥನಿರ್ವನುಮೋರ್ವ ಮಿಗಿಲೆನಿಸಿ ॥ ೧೧ ॥

ಈತನಾ ಸತಿ ನಾಗಲಾಂಬೆಯು ।
ಪ್ರೀತಿಯಿಂವಾಚರಿಸಿ ನಾಥನ ।
ಮಾತಿನೊಳೆ ವಿಶ್ವಾಸಮಂ ತಳೆದೆರಡೆಣಿಸದಲೆ ।
ವೀತರಾಗದೊಳೈಕ್ಯತೆಯನುಂ ।
ಸಾತಿಶಯದಿಂ ಪೊಂದಿ ಗೃಹಮಂ ।
ಭೀತಿಯಿಲ್ಲದೆ ನಡೆಸುತಿಪ್ಪಳು ಪಲ್ಲಟಂಗೊಳದೆ ॥ ೧೨ ॥

ಮುಂದೆ ಈಕೆಯ ಗರ್ಭದೊಳು ಮೈ ।
ತಂದನುಂ ಶಿವನಾಗವಾಕೆಯು ।
ಚಂದಗರ್ಭವ ಧರಿಸೆ ಬಯಕೇರ್ಪಟ್ಟವೈಯಂದು ॥
ಸಂದದೃಷ್ಟಿಯು ಮಂದವಾಯ್ತು ।
ಚಂದನಡಿಗೆಯು ನಿಂತಿತುಂ ಸಲೆ ।
ಪೊಂದಿದಳು ಮೈತುಂಬ ಬಿಳ್ಪಂ ಕಂಗೆ ರಸಮಾಗಿ ॥ ೧೩ ॥

ಸೊಸೆಗೆ ದಿನದೊಳು ಬೀಳೆ ಖುಷಿಯಿಂ ।
ದೆಸೆವ ಅತ್ತೆಯು ಪಿರ್ಗಿ ಭಾಸ್ಕರ ।
ಬಿಸಿಲುಮಂ ತೋರಿಸದೆ ಮನೆಗೆಲಸವನು ಮಾಡಿಸದೆ ॥
ಆಸವಳಿದೊಡಂ ತಾನೆ ಗೈದೀ ।
ಬಸುರೆ ತಾನೇಂ ಮಾಳ್ಪಳೆಂಬುತ ।
ಮುಸವರದಿ ಮುಗಿಸುವಳು ಜರೆಯಿಂ ಟೊಂಕ
ಬಗ್ಗಿದೊಡು ॥ ೧೪ ॥

ಇತ್ತ ಬೇನೆಯ ತಿಂಬುತಿರೆ ಪತಿ ।
ಯೊತ್ತರದಿ ವರ ಸೂಲಗಿತ್ತಿಯ ।
ಹತ್ತಿರಕೆ ನಿಲಿಸುತ್ತೆ ಹೆರಿಗೆಯ ಬಾಧೆಯಂ ಬಿಡಿಸೆ ॥
ಸ್ತುತ್ಯಳುಂ ಶುಭ ತಿಥಿಯೊಳಾಗಳ್ ।
ನಿತ್ಯನಂತಾಽಪೆತ್ತಳಿಶ್ವಿಯು ।
ಮಿತ್ತು ಮಿಗೆ ಪದಿನೆಂಟನೂರಾ ನಾಲ್ವತಾನಾಕು ॥ ೧೫ ॥

ವರ ಕುಮಾರಂ ಜನಿಸೆ ನರರಂ ।
ಪರಿದು ತಿಂಬುವ ಮನಸಿಜಂ ಮಿಗೆ ।
ವಿರಸಮಂ ಕುಡುತಿರ್ಪ ಕ್ರೋಧವು ಸರಿಮುಮಾಬಳಿಕ ॥
ಸರಸಮಾದಾಶಾಂತಿ ದಾಂತಿಯು ।
ಪಿರಿದು ಸುಖಮಂ ಕುಡುವ ವಿರತಿಯು ।
ತುರಿತದಿಂ ಬರೆ ಹರುಷವಾಯ್ತೊನಾಡಿಗೇವೇಳ್ವೆ ॥ ೧೬ ॥

ಧೈರ್ಯಮುಣ್ಮಿತು ವಿರತ ಬಿಂದಕೆ ।
ಕ್ರೌರ್ಯಕರಗಿತು ಯೋಗಿ ನಿವಹದ ।
ಶೌರ್ಯಮಂ ತಾಳಿದರುಮಾವೇದಾಂತ ಸೂರಿಗಳು ॥
ಆರ್ಯರೊಳ್ ಸಂಪೂಜ್ಯ ಸದ್ಗುರು ।
ವರ್ಯ ಧರೆಗವತರಿಸಿ ಬರಲಾ ।
ತೂರ್ಯವನಸತೆಯಂ ತಳರ್ದರು ಬ್ರಹ್ಮಚಾರಿಗಳು ॥ ೧೭ ॥

ಎಲ್ಲೆಡೆಗು ಮನೆಮನೆಗೆ ಸಾರಣೆ ।
ಚಲ್ವ ಬಣ್ಣದ ರಂಗವಲ್ಲಿಯು ।
ಮೆಲ್ಲಿ ನೋಡ್ದೊಡು ತಳಿರು ತೋರಣ ವಾದ್ಯ ರಭಸಗಳು ॥
ಉಲ್ಲಸದಿ ಸಕ್ಕರೆಯ ವಿತರಣ ।
ಸಲ್ವ ಪೂಜಾ ದಾನಧರ್ಮಂ ।
ಬಲ್ಲರಿಂಗಾಶ್ಚರ್ಯಮಂ ಕುಡುತಿಹವು ಕ್ರಮದಿಂದೆ ॥೧೮॥

ಎಳೆಯನಾ ಮುಖಕಮಲಮಂ ಕಂ ।
ಡೊಲೆದು ಪಿತನುಂ ಹರ್ಷದಿಂ ಮುನಿ ।
ಗಳ ಸುಜಾಣರ ಗುರುವಿರಕ್ತರ ಕರಿಸಿ ಕಂಠಕ್ಕೆ ॥
ನಲಿದುಮಿವರಿಂ ಲಿಂಗಮಂತಾ ।
ನುಳುಗಿ ಕಟ್ಟಿಸಿ ಶುದ್ಧಮಂ ಗೈ ।
ಸಿಳೆಯೊಳಂ ಜಸ ಪಸರಿಸುವ ತೆರನೆಸಗಿದಂ ಬಿಡದೆ ॥೧೯॥

ಘಣೆಯೊಳಂ ವಿಧಿ ಬರೆವುದಕೆ ಸಲೆ ।
ಮನೆಗೆ ಬಪ್ಪನುಮೆಂದು ಸ್ತ್ರೀಯರು ।
ನೆನೆದುಮಲ್ಲಿಯ ಗುಂಡುಕಲ್ಲನು ಸೆಟಿಗೆಯಂ ಮಾಡಿ ॥
ಅನುನಯದಿ ಪೂಜಿಸುತಮಂದಿನ ।
ವಿನುತಕರಮಾದ್ಯೆದ ದೆಶಿಯಂ ।
ಕೊನೆಗೊಳಿಸಿ ಕುಳಿತರು ವಿಮಂಡಿತಮಾದ ತಾಣದೊಳು ॥೨೦॥

ಬಳಿಕ ಶಿಶುವಿಗೆ ಪನ್ನೆರಡು ದಿನ ।
ದೊಳೆ ಪೆಸರಿಡುವದಂ ವಿಲೋಕಿಸಿ ।
ಲಲನೆವಿಂಡುಂ ಜಳಕಮಂ ಮಾಡಿಸಿ ಸುತೊಟ್ಟಲದಿ ।
ಮಲಗಿಸುತ ಸವಿ ಗುಗ್ಗರಿಗಳಂ ।
ಮೆಲೆದು .ಮಿಥರೊಳೆ ಹಾಸ್ಯಮಂ ಗೈ ।
ದೆಳೆಯುನಾಕರ್ಣದೊಳು ಮುಮ್ಮಡಿ ಕುಟುಟು ಕುರ್ವಾಡಿ ॥೨೧॥

ಧೀರ ಪರಮೇಶ್ವರನ ಗುಣಮಂ ।
ಚಾರು ಯೋಗಿಯು ತಳೆವನೆಂದುಂ ।
ವೀರ ವನಿತೆಯರಾಗ ಬಾಬಣ್ಣೆಂದು ಪೆಸರಿಟ್ಟು ॥
ಆರತಿಯನುಂ ಬೆಳಗಿ ರಾಗದಿ ।
ನೇರ ಮನಮಂ ಸೆಳೆವ ಸುಂದರ ।
ಸಾರ ಜೋಗುಳ ಪದ್ಯಮಂ ಪಾಡಿದರುಮಿಂತೊಲೆದು ॥೨೨॥

ಬಿರಿದ ಕೇದಿಗಿ ಹೊಡಿಯೆ ಜೋಜೋ ।
ಸುರಸ ಮಲ್ಲಿಗಿ ಹುಡಿಯೆ ಜೋಜೋ ।
ಸರಸ ಸಂಪಿಗಿ ಕುಡಿಯೆ ಸುರತರು ಮಿಡಿಯೆ ಸದ್ಗುರುಜೋ ।
ಅರುವಿನಗ್ನಿಯ ಕಿಡಿಯೆ ಜೋಜೋ ।
ಶರಣ ಸಂಕುಳದಡಿಯ ಜೋಜೋ ।
ಮಿರಗುವಾ ಭಂಗಾರ ಕಳಸದ ಗುಡಿಯೆ ಯತಿವರ ಜೋ ॥೨೩॥

ಸವಿ ನುಡಿಗಳರಗಿಣಿಯೆ ಜೋಜೋ ।
ಸವಿವ ದ್ರಾಕ್ಷಿಯ ಗೊನಿಯೆ ಜೋಜೋ ।
ಕವನ ರತ್ನದ ಖಣಿಯೆ ಚಿಂತಾಮಣಿಯೆ ಚಿನ್ಮಯ ಜೋ ॥
ಕುವಲಯದ ಬಿಳಿತೆನಿಯೆ ಜೋಜೋ ।
ಭವ ನಿವಾರಿಪ ಮುನಿಯೆ ಜೋಜೋ ।
ನವ ರಸಾನ್ನದ ಧನಿಯೆಯಮೃತ ಹನಿಯೆ ಸನ್ಮುನಿ ಜೋ ॥೨೪॥

ವರ ನಿರಂಜನ ಮೂರ್ತಿ ಜೋಜೋ ।
ಪರಮ ಮಾ ನಿಸ್ವಾರ್ಥಿ ಜೋಜೋ ।
ನೆರೆ ಪುರಾಣವ ಬರೆವ ಮಿಗೆ ಸತ್ಕೀರ್ತಿ ಸತ್ತಮ ಜೋ ॥
ಹರಗಣಜನ ದಯಾರ್ತಿ ಜೋಜೋ ।
ವರ ವಿಡುವ ಸಂಪೂರ್ತಿ ಜೋಜೋ ।
ಧರೆಯೊಳಗೆ ಸಂಪೂಜ್ಯವಹ ಸಿದ್ಧಾರ್ಥಿ ಸಿದ್ಧನೆ ಜೋ ॥೨೫॥

ಪಿಂದಿನಿಂದಾಸಾಧ್ವಿ ಸಂಕುಳ ।
ದಂಥೆಯಂ ಮುಗಿಸುತ್ತೆ ತೊಟ್ಟಿಲ ।
ವಂದ ಕರದಿಂ ತೂಗಿ ಸವಿಯಂ ಮೆಲ್ದು ತಂತಮ್ಮ ॥
ಚಂದ ಗೃಹಗಳ ಮಾರ್ಗಮಂ ಪಿಡಿ ।
ದಿಂದುಧರನಿವನೆಂದುಟುಗರಿಸಿ ।
ಯಂದುಮೈದರು ಶಿಶುವಿಗಾಶೀರ್ವಾದಮಂ ಮಾಡಿ ॥೨೬॥

ಇತ್ತ ಚಿನ್ನದ ತೊಟ್ಟಿಲದೊಳಿಹ ।
ತತ್ತುಕಂ ಬಾಯೊಳಗೆ ಬೆರಳಂ ।
ತೆತ್ತು ಜೀವರ್ಕಳಿಗಮಿಾಭವ ಚಕ್ರವ್ಯೂಹವಿದು ॥
ಮತ್ತೆ ನೀರೊಳು ಬೆರಳನಿಕ್ಕುತ ।
ಮೊತ್ತಿ ನೆಕ್ಕಿದೊಲಿಹುದುಮದರಿಂ ।
ಮಿಥ್ಯೆಯೆಲ್ಲವುಮೆಂದುಮರುಪುವ ಸಯ್ಗೆಯಂ ಮಾಡಿ ॥೨೭॥

ಜನನ ಮರಣದ ದುಃಖಮಂ ಮಿಗೆ ।
ತನುವಿನೋಳಿಹ ದುಃಖಮಂ ವರ ।
ವನಿತೆ ವನಜೆಯರಿಂದೆ ಬಪ್ಪಾದುಃಖಮಂ ಬಳಿಕ ॥
ಇನಿದು ವಿಷಯದ ದುಃಖಮಂ ಸಲೆ ।
ಮನಸಿನಾಬಹು ದುಃಖಮಂ ಕಂ ।
ಡಿನಿತರಿಂದೆ ಬಳಲ್ವರೆಂದಳಲುತಿಹ ತೊಟ್ಟಿಲದಿ ॥ ೨೮ ॥

ಸಕಲರಂ ನಾಯಿಯೊಲು ಮಾಡಿದ ।
ವಿಕಲ ಮಾಯೆಯು ಹಿಚುಕುವೆನೆನುತ ।
ಸುಕರ ಮುಷ್ಟಿಯ ತೋರ್ಪನಾದೊಡುಮವಳನೊದೆವೆಂಬ ॥
ಅಕುಟಿಲದ ಪದ ಚಲ್ಲಿ ಕುರುಪಂ ।
ನಿಖಿಲ ಜನಕಂ ತಿಳುಪಿಯುವರಂ ।
ಚಕಿತಮಂ ಮಾಡುವನು ದಿನವಜ್ಞೇಯ ರೀತಿಯಲಿ ॥ ೨೯ ॥

ಕರದಿ ನಾಡೆ ಪಿನಾಕಮಂ ತಾಂ ।
ಕೊರಳೊಳಮಾವಿಷದ ಫಣಿಯಂ ।
ಶಿರದೊಳಂ ಬಾಲೇಂದು ಶರಿರದಿ ಭಸ್ಮಮಂ ಬಳಿಕ ॥
ಮೆರೆವ ಮಂದಾಕಿನಿಯನುಂ ಮಿಗೆ ।
ಧರಿಸಿ ಹರನು ಪವರ್ಗವಾಗಿಹ ।
ನರಿದಿದನುಮಿವನಿಂದೆ ಬೇಳ್ಪಪವರ್ಗಮಂ ಬಿಡದೆ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮದ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೧ನೇ ಅಧ್ಯಾಯವು ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೪೧

## ೨ನೇ ಅಧ್ಯಾಯ

**ಸೂಚನೆ :**

ಭಾವಣಿಯ ಗ್ರಾಮದೊಳು ಬಾಲ್ಯದ ।
ಪಾವನದ ಮಾಲೀಲೆಗಳನುಂ ।
ಸಾವಧಾನದಿ ತೋರಿದಂ ಬಾಬಣ್ಣ ಶೇಖರನು ॥ಪಲ್ಲ॥

ಅಲವ ಶಕ್ತಿಯ ಗಜದ ಗಂಡ ।
ಸ್ಥಳವ ಮೆಟ್ಟುವ ಸಿಂಹನಂದದಿ ।
ತುಳಿವೆನುಂ ಪಿರಿಯರ್ಕಳಿರ್ದೊಡು ಕೀಳ ದ್ವೈತಿಗಳಂ ॥
ಅಲುಗದದ್ವೈತದಲಿಯೆಳೆಯರು ।
ಸುಳಿಯುತಿರೆ ಯವರಂ ವಿಬುಧರೆಂ ।
ದುಲಿವೆನೆಂಬುವ ದೇವ ಗುಡಿಸಾಗರದ ದೊರೆ ಪೊರೆಗೆ ॥ ೧ ॥

ಮಗನ ಮುಖದಾ ಜೊಲ್ಲು ಬಾಯಿಯ ।
ತಗೆದ ಯೆಳೆನಗೆ ಸೂಪ್ಪ ತೊದಲುಲಿ ।
ಮಿಗೆ ವಿರಾಜಿಪ ನುಣ್ಗದಪುಮುಜ್ವಲದ ಕಣ್ಣುಗಳು ॥
ಅಗಲಫಣೆ ಬಟ್ಟದೊಡೆಯಧರದ ।
ಬಿಗುವು ದಟ್ಟಡಿ ಯಂಬೆಗಾಲುಂ ।
ಸೊಗಯಿಸುವ ಮೃದು ತೋಳ ಕಂಡುಂ ತಾಯಿ ಹಿಗ್ಗುವಳು ॥ ೨ ॥

ಆನಿ ಬಂತವ್ವಾನಿ ದೇವರ ।
ಧ್ಯಾನಮಂ ಬಿಡದಾನಿ ಶಾಸ್ತ್ರ ವಿ ।
ಧಾನ ರಸಮಂ ಪೀರ್ವ ಜಿಜ್ಞಾಸುಗಳ ಪೊರೆವಾನಿ ॥
ಕ್ಷೋಣಿಯೊಳಗೈರಾವತದವೊಲು ।
ಕಾಣುವಾ ಮದ್ದಾನಿ ಸದ್ಗುರು ।
ಭಾನು ಸಾಕಿದ ಪಟ್ಟದಾನಿ ನಿರಾಶವಂತಾನಿ ॥ ೩ ॥

ಪೋಳಿಗೆಯ ಮೆಲೆವಾನಿ ಪರಂಗ ।
ಮಾಳವಾಡದ ಶ್ರೇಷ್ಠದಾನಿ ವಿ ।
ಲೋಲಮನನುಂ ತುಳಿದು ಜ್ಞಾನದ ರತ್ನದಳೆದಾನಿ ॥
ಶೀಲಮುಂ ನೆರವೇರಿಪಾನಿ ವಿ ।
ಶಾಲ ಜಗವಿಲ್ಲೆಂಬುವಾನೆಂ ।
ದೋಲಗಿಸುತೀಯಾಟವಾಡಿಸಿ ಹಿಗ್ಗುವಳು ಮಾತೆ ॥ ೪ ॥

ಮುಂದೆ ಯಾಬಚ್ಚಿಗಳು ಮೆಂಬುವ ।
ಸುಂವರದ ನುಡಿಯಂ ನಿರೂಪಿಸಿ ।
ಕಂದನಂ ಬಹುಬೆಳಸಿ ಶಾಲೆಗೆ ಕಳುಪಿದರುಮಾಗ ॥
ಬಂದು ಶಾಲೆಯ ಗುರುಗಳಿಂಗಂ ।
ವಂದಿಸುತೆ ತಾಂ ಕುಳಿತುಕೊಳೆಯುವ ।
ರಂದುವೊಂಕಾರವನು ರಚಗಳ ಬರೆದು ತೋರಲ್ಕೆ ॥ ೫ ॥

ಇವುಗಳಕ್ಷರಮಲ್ಲ ಗೆರೆಯುಂ ।
ತವೆ ವಿಚಾರದಿ ಕಲಿಸಿಯೆನ್ನಂ ।
ಭುವಿಯೊಳಗಮದ್ವಿತಿಯ ಬುಧನಂ ಮಾಡಿರೆನೆ ನಕ್ಕು ॥
ಇವು ಕರೆ ಗೆರಿಗಳಾದೊಡುಂ ತವ ।
ನಿವಳ ತಲೆಯಂ ಬಲು ಸುಧಾರಣೆ ।
ಜವದಿ ಮಾಳ್ಪವು ಕಲಿಯ ಬೇಕೆನೆಯಾಗ ಪ್ರತಿನುಡಿದಂ ॥ ೬ ॥

ಕ್ಷರವು ಮೆಂದೊಡೆ ನಾಶ ಬಳಿಕ ।
ಕ್ಷರವುಮೆನೆಯಿದು ನಾಶ ರಹಿತಂ ।
ಭರದೊಳೀಯಕ್ಷರಮುಮಂ ಕಲಿಸಲ್ಕೆ ಕಲಿವೆಂದ ॥
ಅರಿಯದಿದನುಂ ಶಿಕ್ಷಕರು ಗಾ ।
ಬರಿಸಿ ಶಾಲೆಯ ಬಿಡಿಸುವದಕಂ ।
ಕರಿಸಿ ಪಿತನಾ ನುಡಿದರೀತನನೊಯ್ದು ಮಠದಲ್ಲಿ ॥ ೭ ॥

ಇರಿಸಬೇಕೆನೆ ನಕ್ಕುವಿಾತನು ।
ಪಿರುತಿ ಸುತನಿವನೆಂದು ಮನೆಗಂ ।
ಕರೆತರುತ್ತಂ ಮುಂದೆ ಶಾಲೆಯ ಬಿಡಿಸಿದನುವಮಾಗ ॥
ಸರಸ ಮಿತ್ರರ ಕೂಡ ಹೂರ್ತಿತಿ ।
ಪಿರಿದೆನಿಪ ಗಿಡ ಮಂಗನಾಟವು ।
ಮೆರೆನ ಚಿಣಿಫಣಿ ತಿಳ್ಳಿ ಬುಗುರಿಯು ಗುಂಡು ಚಂಡುಗಳ ॥ ೮ ॥

ಆಟವಾಡುತೆ ತತ್ತ್ವದಿಂದಲಿ ।
ಚೀಟರಿಂಗಂ ತಿಳುಪಿದಿಂತುಂ ।
ನೀಟವಾದೀ ಕಾಯ ಮರದೊಳು ಮಿಂದ್ರಿಯಗಳೆಂಬ ॥
ಈಟಿಯುಗುರಿನ ಮಂಗವಿರೆಯಿವು ।
ಚಾಟು ವಿಷಯದ ಟೊಂಗೆಯೊಳು ಜಿಗಿ ।
ದಾಟಮಂ ಮಾಡುತ್ತೆ ನಲಿವವುಂಜಡೆಂತೆಂದು ॥ ೯ ॥

ಮಾಯೆಯೆಂಬಾ ಪಿರಿಯ ಹುದ್ದರಿ ।
ಪ್ರಾಯದಾ ಸರಮನೆಯ ಕಟ್ಟುತೆ ।
ಹಾಯಗೊಡಳುಂ ಜೀವ ದೇವರ ಸಂಕುಳವನೆಲ್ಲ ॥
ಶ್ರೇಯಸುಪ್ಪನು ಪಾರು ಮಾಡಿಸ ।
ದಾಯಸಂಗೊಳಿಸುತ್ತೆ ಸಗ್ಗದಿ ।
ನಾಯಿಯಂ ಮಾಡುವಳು ಮೋಹವ ಬೀರಿಯೆಂತೆಂದು ॥ ೧೦ ॥

ಶರಿರ ಬಣ್ಣದ ಬುಗುರಿಯಂ ಚಲು ।
ಕರದಿ ಪಿಡಿಯುತೆ ಕರ್ಮ ಜಾಳಿಗೆ ।
ಭರದಿ ತೊಡಕಿಸಿ ಬೀಸಿಯೊಗೆದೊಡೆ ನಿದ್ದೆಯಂ ಕೊರೆದು ॥
ತಿರುಗಿ ಬೀಳ್ಪುದು ಸೋತು ನೆಲಕೆಯು ।
ಮುರಿಯಿತೀಯಾಟೆಂದುಮರಿಯದ ।
ಲರೆಮರುಳ ಬುದ್ಧಿಯಲಿ ಪುನರಪಿಯಾಡುತಿಹರೆಂದು ॥ ೧೧ ॥

ಮನವುಮೆಂಬಾ ಚಿಣಿಯನುಂ ಮಿನು ।
ಕಿನ ವಿಷಯಗಳು ಪಿಡಿಯೆ ಜೀವಂ ।
ಕನಲಿ ಸಾಯ್ವಂ ಬೀಸಿಕೊಂಡೊಡು ಮತ್ತೆ ಸಾಯುತಿ ಗ ॥
ಎಣಿಸಿದೊಡೆಯೊಯಾಟದೊಳಗಂ ।
ಕೊನೆಗೆ ಸೋತೊಡೆಯುಗಸುಮಂಚಿಂ ।
ದೆನಿಸುವಾವೊಲು ತನ್ನವರ ಹೆಸರಿಸುತೆ ಸಾಯ್ವೆಂದು ॥ ೧೩ ॥

ಕಣ್ಣ ಮುಚ್ಚಾಲಿಯಲಿ ಮಾಯಾ ।
ಕನ್ಯೆಯಂ ಕಳ್ಳಿಯನು ಮಾಡುತೆ ।
ಪುಣ್ಯ ಜೀವಿಗಳಿವಳ ತಪ್ಪಿಸಿ ಧಾವಿಸ್ಯೆತಂದು ॥
ನನ್ನಿಯಿಂ ಶಿವ ಫಾಜಗಟ್ಟಿಯ ।
ನುನ್ನಿಸಿಯೆ ಮುಟ್ಟುತ್ತೆ ಥೂಸಿಗೆ ।
ಯನ್ನಲದನವಕರ್ಣಿಸಿ ಸಮೀಪಕ್ಕೆ ಬರಳೆಂದು ॥ ೧೩ ॥

ಈ ಶಿಶುವು ಬೀದಿಯಲಿ ಬರೆ ಚಲು ।
ವಾಸ್ಯದಾ ಕಾಂತಿಯನು ಕಂಡು ವಿ ।
ಲಾಸಿನಿಯರೊಲೆದಾಗ ಪಣ್ಣು ಫಳಾರಮಂ ಕೊಟ್ಟು ॥
ಆಶು ಮುದ್ದಿಸಿಯೆತ್ತಿಕೊಂಡುಪ ।
ದೇಶಿಯಂ ಮನೆಗೊಯ್ದು ಪೂಜಿಸಿ ।
ದೇಶಮಂ ಪಾಲಿಪ್ಪನೆಂಬುತೆ ಕಳಿಪರುಂ ಪೊಗಳಿ ॥ ೧೪ ॥

ಕೇಳದಿರ್ದೊಡುಮಿಂದು ಮಳೆಯುಂ ।
ಬೀಳುವದು ಜಗಕೆಲ್ಲಕೆಂಬುವ ।
ಪೇಳ್ವನುಂ ವಂಧ್ಯೆಳಿಗೆ ಶಿಶುವಂ ಪಡೆವೆ ನೀನೆಂದು ॥
ಕೀಳು ಬಡತನ ಬಿಡುವದಂ ತಾಂ ।
ಮೇಲೆ ಬರ ಬೀಳುವದನುಂ ಬಳಿ ।
ಕಾಲಯವು ಕದ ಕಟ್ಟುವದನುಂ ನುಡಿವನುಂ ಬಿಡದೆ ॥ ೧೫ ॥

ಇವರ ಮನೆಯೊಳುಮಾತ್ಮ ವಿಷಯದ ।
ಶ್ರವಣ ಪ್ರತಿದಿನ್ನ ನಡೆಯುವದನುಂ ।
ಕುವರನುಂ ಮಿಗೆ ಕೇಳ್ದು ಮರೆಯದೆ ಮನದೊಳರಗಿಸುತೆ ॥
ಅವನಿಯೋಳದರಂತೆ ನಡೆವಂ ।
ಕವನಮುಂ ಕಟ್ಟುವನುಮದರೊಳು ।
ನವ ರಸಮುಮಂ ಬೆರಸಿ ಚಿತ್ತಾಕರ್ಷಮಂ ಮಾಳ್ಪ ॥ ೧೬ ॥

ಒಂದು ದಿನ ಮಾನಾಮಿಯೊಳಗಂ ।
ಒಂದು ಜನಮುಂ ತಂದ ಪತ್ರಿಯು ।
ನಂದುಮಿಾತನ ತಂದೆ ತಾಯಿಗಮಿತ್ತು ನಮ್ರೊಳಗೆ ।
ಇಂದು ಭಂಗಾರಾಗಿರೋಣವು ।
ಮೆಂದು ನಮಿಸುತಪ್ಪೆದುವದನುಂ ।
ನಂದದಿಂದಲಿ ನೋಡಿಯವರಿಂಗಿತ್ತನುತ್ತರವ ॥ ೧೭ ॥

ಆರಿ ತಪ್ಪಲು ಬನ್ನಿ ತಪ್ಪಲು ।
ಕಾರಿ ತಪ್ಪಲು ಸೆಜ್ಜಿ ರೌದಿಯು ।
ಚೂರು ಭಂಗಾರಾಗಬಹುದೇ ಸುಳ್ಳು ಬಿಡಿರೆಂದು ॥
ಯಾರ ಹಸ್ತದಿ ತಪ್ಪಲೆಲ್ಲವು ।
ಸಾರ ಭಂಗಾರಾಗುತಿಹುದೋ ।
ಆ ರಸಾತ್ಮರೆ ಮನುಜರೊಳು ಭಂಗಾರವೆಂತೆಂದ ॥ ೧೮ ॥

ಇಲ್ಲಿ ಭಂಗಾರಾಗುವಾ ನುಡಿ ।
ಸಲ್ವ ಬ್ರಹ್ಮಜ್ಞಾನಿಯಾಗೆಂ ।
ದುಲ್ಲಸದಿ ಮನುಜರಿಗೆ ತಿಳಪುವದಿದನರಿದು ಕೊಂಡು ॥
ಎಲ್ಲರೊಳಹೊರಗಾವರಿಸಿದಾ ।
ಚೆಲ್ವ ಸುಜ್ಞಾನಾಂತುಮುರೆ ಜಗ ।
ದಲ್ಲಿ ಭಂಗಾರಾಗಿ ಬಾಳ್ವುದೆ ಸರ್ಬ ನೋಡೆಂದ ॥ ೧೯ ॥

ಇದನುಮಾಲಿಸಿದಾ ಜನರ್ಕಳು ।
ಸವಮಳನು ನಿನಗೆನ್ನುತಿಹೆವೆ ।
ಮೈದರಿಸೊಳು ತಪ್ಪಲವನುಂ ಭಂಗಾರ ಮಾಡೆನ್ನೆ ॥
ಬವಿಗೆ ಬಿದ್ದಿಹ ತಪ್ಪಲವನುಂ ।
ಪದುಗಿ ಕರದಿಂಡೆತ್ತಿಯವರ॥
ಪದರಿನೋಳಿಡೆಯಾಯ್ತು ನಿಜ ಭಂಗಾರ ತಚ್ಛಣದಿ ॥ ೨೦ ॥

ಕಂಡು ಪೊಂಪುಳಿ ಪೋಗಿ ಜನವುಂ ।
ಮುಂಡೆಯಿಂ ಪಾದಾರವಿಂದಕೆ ।
ದಂಡ ವಂದನೆಯಂ ವರೇಣ್ಯಗೆ ಸಲಿಸಿ ಪೊಗಳಿದರು ॥
ಮುಂಡಲದಿ ನೀನೋರ್ವನು ಭವ ।
ದಂಡೆಯಂ ಮುಕ್ಟಿಸುವ ವಿದ್ಯೆಯ ।
ಪಂಡಿತನು ಶಿವಯೋಗದಾಸಂಪನ್ನನೆಂದೆನುತೆ ॥ ೨೧ ॥

ಕಿರಿಯನಿರ್ದೊಡು ತವ ಸುಮತಿಯಾ ।
ಹಿರಿಮೆಯಂ ನಾವ್ ಕಂಡು ಸಂತುಷ ।
ವೆರಿಸಿ ನಿನ್ನಯ ಸೇವೆಯಂ ಮನ ದುಂಬಿ ಮಾಡುತ್ತೆ ॥
ಭರಿತವಾದಾ ಬ್ರಹ್ಮದಿರವಂ ।
ಶರಿರವಿರ್ಪುದರೊಳಗೆ ನಿನ್ನಿಂ ।
ದರಿತು ಪರಮಾನಂದವುಂ ಕಾಂಬುವೆವುಮೆಂತೆಂದು ॥ ೨೨ ॥

ನಮ್ಮ ಕನ್ನಡ ನಾಡಿನೊಳು ನೀಂ ।
ರಮ್ಯಕರ ಮನೆಯೊಳಗೆ ಜನಿಸುತೆ ।
ಬ್ರಹ್ಮನಿರ್ದೊಡು ಬಂದಿರುವೆ ನರ ರೂಪವುಂ ಧರಿಸಿ ॥
ಉಮ್ಮಳವನುಂ ತೆತ್ತು ಸಂಸೃತಿ ।
ಹೆಮ್ಮೆಯೊಳು ಬೈಚಿಟ್ಟು ಜೀವರ ।
ಸುಮ್ಮನೇ ಸುಯ್ಯುಗ್ಗಡಿಸಿ ಕಾಡುವ ಮಾಯೆ ಬಿಡಿಸೆಂದು ॥ ೨೩ ॥

ಮರದ ತುದಿಯೊಳರಾಮು ಕುಳಿತಿಹ ।
ಕರಿದು ಬಣ್ಣದ ಕಾಗಿ ಕೆಳಗಣ ।
ಹರಿದು ತೃಣಮಂ ತಿಂಬ ಪಶುಗಳ ವ್ರಣಮುಮಂ ಕಂಡು ॥
ಹರುಷಮಂ ಮಿಗೆ ದಾಳ್ದು ರಾಗದಿ ।
ಭರದೆರಗಿ ತಿಂಬಂತೆಯೊ ಮನ ।
ಚರಿಸಿ ವಿಷಯವ ತಿಂಬುವದಿದಂ ಬೈಯ್ದು ಬಿಡಿಸೆಂದು ॥ ೨೪ ॥

ಒಂದು ವಸ್ತುವು ತಾನೆಯಿರ್ದುಂ ।
ಮುಂದೆ ಮತ್ತೊಂದಾಗಲಾರದು ।
ಮಿಂದು ಮತ್ತೊಂದನ್ನು ತಾನೆಂದರಿಯ ಬಾರದಲಾ ॥
ಒಂದು ಮತ್ತೊಂದಾಗ್ಗಿ ನಿಂತೊಡೆ ।
ಸಂಧಿಸುವದುಂ ನಾಶವದಕಂ ।
ಚಂದದಿಂದಿದನರುಪಿ ನಿಜಮಂ ತೋರು ನೀನೆಂದು ॥ ೨೫ ॥

ಉರಗದಾನಡೆ ಡೊಂಕು ನದಿಗಳು ।
ಹರಿಯುವದು ಬಲು ಡೊಂಕು ಶಂಖದ ।
ಶರಿರ ತುಂಬಾ ಡೊಂಕು ನಾಯಿಯ ಬಾಲವದು ಡೊಂಕು ॥
ಮೆರೆವ ಸಂಸ್ಕೃತಿ ಚಿತ್ರವೀಪರಿ ।
ಸರಿಯುಮೊಂದಿನವಿರದೆ ಡೊಂಕಿನ ।
ಸರಣಿಯಿಂ ಕಾಡುವದು ನರರಂ ತಪ್ಪಿಸಿದನೆಂದು ॥ ೨೬ ॥

ಅರಿಯೆ ಧರ್ಮಾಧರ್ಮದಿಂದಲಿ ।
ಶರಿರ ಬಪ್ಪುದು ಶರಿರದಿಂದಲಿ ।
ಮೆರೆವ ಧರ್ಮಾಧರ್ಮವಿಂತನ್ಯೋನ್ಯದಾಶ್ರಯವು ॥
ಬೆರೆತುಕೊಳೆ ಮೊದಲಾವುದಿದರೊಳು ।
ಮರಿಯಲಾಗದುಮೆಂದು ನೀನುಂ ।
ಶರಿರ ಸಂಬಂಧಾತ್ಮಗಿಲ್ಲೆಂದರುಪಿ ಪೊರೆಯೆಂದು ॥ ೨೭ ॥

ಕೊಡವು ತನ್ನಿರುವಿಕೆಯನೆಂದಿಗು ।
ಮೆಡಬಿಡವೆ ನಿಟ್ಟಸದುಮೇಕೆನೆ ।
ಪಡೆದಿರುವಿಕೆಯ ಮುನ್ನ ತಾನಿಲ್ಲವದುಮಿದರಂತೆ ॥
ಒಡೆದ ನಾಶವನರಿಯದೇಕೆನೆ ।
ತೊಡೆದ ನಾಶಾನಂತರಂ ಸಲೆ ।
ಕಡೆಗೆ ತಾನಿಲ್ಲವಿದರಿರವಂ ತಿಳುಪಿ ಪೊರೆಯೆಂದು ॥ ೨೮ ॥

ಕೂಡಿದಾಜನ ಮತ್ತೆ ಪ್ರೇಮದಿ ।
ನೋಡಿಯೊತನ ಗಾತ್ರಮಂ ಮಿಗೆ ।
ಗಾಢದಿಂ ಪರಿತಬ್ಬಿ ಪಾದ ಸರೋಜವಮಂ ಮುಟ್ಟೆ ॥
ಪಾಡಿ ನಮಿಸುತೆ ತಂದೆ ತಾಯ್ಗಳ ।
ಕೂಡ ನೀವೀ ಯಾತ್ಮವಿದನಂ ।
ನಾಡೆ ಪಡೆದು ವಿಮುಕ್ತರಾದಿರಿಯೆಂದುವೈದಿದರು ॥ ೨೯ ॥

ಯಾರು ನೀನೆನೆ ಶೂಲಿ ವೈದ್ಯರ ।
ಸಾರು ಪಶುಪತಿಯೆನೆ ವಿಷಾಣಂ ।
ಚೂರುಮಿಲ್ಲವು ನೀಲಕಂಠನೆ ಕೂಗು ನವಿಲದೊಲು ॥
ಸಾರ ತಾಣ್ವೆನೆ ವೃಕ್ಷ ನುಡಿಯದು ।
ಚಾರುತರದ ಶಿವಾಧವೆನೆ ವನ ।
ಸೇರು ಮಾ ಶಿವೆ ನುಡಿಗೆ ನಕ್ಕ ಶಿವಾಧಿಪತಿ ಪೊರೆಗೆ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮದ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೩ನೇ ಆಧ್ಯಾಯವು ಮುಗಿದುದು ॥

— ಶುಭ : —

ಒಟ್ಟು ನುಡಿಗಳು ೮೧

# ೩ ನೇ ಅಧ್ಯಾಯ

ಸೂಚನೆ :

ಎಳಕ ವಯದೊಳು ಪರಿಣಯವುಮಂ ।
ಬಳಗವವರೊತ್ತಾಯಕಾಗುತೆ ।
ಚಲು ಕುಮಾರಿಯು ಪಡೆದುದಂ ನಾಂ ಬರೆವೆನಲಸದಲೆ ॥ ಪಲ್ಲ ॥

ನವರಸದೊಳಂ ಶಾಂತ ರಸಮುಂ ।
ಶಿವನೆ ನಿನಗಿಷ್ಟಾದ ತೆರದೊಳು ।
ಹವಣಿಪೆನು ನಾನಾದೊಡುಂ ಮಿಗೆ ಶಾಂತ ರಸಕಾಗಿ ॥
ತವ ರಸಾಂಬುಧಿಯೊಳಗೆ ಮೀಯುವ ।
ಸವಸವನುಮಿಡು ಬೇರೆ ರಸಮುಂ ।
ಜವದಿ ಕನಸಿನೊಳು ನೆನೆಯದೊಲುಂ ಮಾಡುಮನವರತ ॥ ೧ ॥

ನಿಜಗುಣರಮಾಗ್ರಂಥಮುಂ ವರ ।
ನಿಜವರಹುವ ವಿಚಾರಸಾಗರ ।
ಸುಜನರಿಂದರಿತಿರುವೆನು ಮುಖೋದ್ಗತವನುಂ ಮಾಡಿ ॥
ಅಜನಿಹೆನುಮೆಂದರಿದು ಕೊಂಡೀ ।
ಗಿಜಗುಡುವ ಸಂಸಾರ ಮಾಳ್ಪಿದ ।
ರಜಕುಮಿಲ್ಲೆನಗೆಂಬವುಂಡಾಡಿಯನು ಪೊರೆ ಶಿವನೆ ॥ ೨ ॥

ಕೆಲದಿನಂಗಳು ಕಳೆದ ಬಳಿಕಂ ।
ಚೆಲುವ ಗುಡಿಸಾಗರದ ಸತ್ತ್ವಮು ।
ನಿಲದೆ ಪ್ರಾಯಕೆ ಬಂದನುಂ ಪ್ರತಿಪತ್ತಿಯಂ ಪೊಂದಿ ॥
ಕುಳಿತುಕೊಳ್ಳನು ಪರರ ಮನೆಯೊಳು ।
ಕೆಳಗೆ ಮುಖಮುಂ ಮಾಡಿ ನಡೆವಂ ।
ಬಳಿಗೆ ಸುಳಿದೊಡು ನಾರಿ ಕುಳಮುಂ ನೋಡನೆದರೆತ್ತಿ ॥ ೩ ॥

ದುರಿತ ಕುಲ ಪ್ರಿಯ ಬಂಧುಯೆನಿಪಾ ।
ಹರಿದವಸ್ಥೆ ತಳರ್ದು ನಿಂತೊಡು ।
ಶಿರದಿ ಕೂದಲ ಬಾರ್ಜಿ ಬೈತಲಿ ತೆಗೆದು ನಟಯುಂತೆ ॥
ಪಿರಿದು ವನಪಂ ಗೈದು ಜೈನಂ ।
ಕೊರಳೊಳಗೆಯು ಪೊಣರ್ಚಿ ಘಟಿಯಾ ।
ರುರುಕರದಿಂಸಿ ಹೋಳಿ ಪದಮಂ ಪೇಳುತಿರಲಿಲ್ಲ ॥ ೪ ॥

ಕ್ಷೌರಮಂ ಪ್ರತಿದಿನವು ಮಾಡಿಸಿ ।
ಮೋರೆಯಂ ಕನ್ನಡಿಯ ತೆರ ಗೈ ।
ದಾರಳುಕುಮಿಲ್ಲದಲೆ ನವನವ ಬೆಲೆಯ ವೇಷವನು ॥
ಓರಗೆಯರಲಿ ಧರಿಸಿ ಬಾಯೊಳ ।
ಸಾರ ಸಿಗ್ರಿಟುಮಿಟ್ಟು ಪೆಂಪಿನ ।
ಯೋರೆಗಣ್ಣಿಂ ನೋಳ್ಪ ಬಿಣುಗಿನ ಚಾಳಿಯವನಲ್ಲ ॥ ೫ ॥

ತಲೆಗೆ ಮಿಗೆ ಪದಿನಾರು ಮೊಳದಾ ।
ಬೆಲೆಯ ರೇಶಿಮಿ ಪಟಗವಂ ಬಲು ।
ಹೊಳೆವ ಜರ ಮೇಲ್ಮಾಡಿ ಮುರಿಗೆಯ ಹೊಡೆದು ಸುತ್ತುತ್ತೆ ॥
ಬಳಿಕಮುಟ್ಟಾತಿಳುವು ಧೋತರ ।
ವೆಳೆಯುತಿರ್ದೊಡು ನೆಲದಿ ಮೇಲಕ ।
ಮೆಳೆದು ಸಿರ್ಕಿಸಿ ಕೊಳ್ಳದಾ ಹಂಗಾಮದವನಲ್ಲ ॥ ೬ ॥

ಮೈಗೆ ಪರಿಮಳ ಬೀರ್ವ ಸೋಪಂ ।
ಮೂಗಿಗಂ ಮಾಗಂಧಮಂ ಚಲು ।
ಕೈಗೆ ಭಂಗಾರಂಗುಲಿಯನುಂ ಧರಿಸಿ ನಗೆ ಮೊಗದಿಂ ।
ಬೇಗ ನಾಟಕ ವಾಟದೊಳಗಂ ।
ಸೋಗುಗಳನುಂ ಪಾಕುತಂ ನಿಜ ।
ವಾಗಿ ಪ್ರಾಯವ ಹಾಳ್ಗೆಡಿಪ ಬಲು ಹುಚ್ಚಿನವನಲ್ಲ ॥ ೭ ॥

ನೀರ ಮೇಗಣಗುರುಳಿ ಸರ್ಗವ ।
ಕಾರಭಾರಗಳೆಂದುಮರಿಯುತ ।
ನೇರಮಂ ಮತಿಯೊಳು ಪೊಣರ್ಚುತೆ ಜಗದಿ ನಡೆಯುತ್ತೆ ।
ಆರಿಗಾದೊಡು ಮಣಿದು ಬೆಲೆಯುಂ ।
ಸಾರ್ದು ಕುಡುತ ಪೊದಳ್ದ ವಿಜ್ಞರ
ಚಾರು ಪಥಮಂ ನಂಬಿ ನಡೆವಂ ಪಾಪಕೃತಿಗಂಜಿ ॥ ೮ ॥

ಇಂತಿಹ ಮಹಾತ್ಮನನು ನೋಡುತ ।
ಸಂತುಷಂಗೊಳುತೊರ್ಮ್ಮೆ ಮನೆಯರು ।
ಕುಂತು ಯೋಚಿಸಿದರು ವಿವಾಹದ ಸಕಲ ವಿಷಯಮುಮಂ ॥
ಅಂತರಿಸದಲ್ಲಿಂದೆಯೊಂದುಂ ।
ಮುಂತಿನಾಪ್ತರ ಕನ್ನೆಯೊಡ ಬ ।
ಲ್ವಂತದಿಂ ನಿಬ್ಬಣವ ಮಾಡಿದರತುಳ ವೈಭವದಿ ॥ ೯ ॥

ಮುಂದೆ ಸೊಸೆಯಂ ತಂದುಮಾಕೆಗೆ ।
ಚಂದದಿಂ ಬಾಳ್ವೆಯನು ಸಾಗಿಸು ।
ವಂದವಾದಾ ಮಾರ್ಗಮಂ ಪೇಳಿದರು ಲಗುಮಾಡಿ ॥
ಕಂದುಗೊರಲನ ಕೈಯ ಪಿಡಿದೆಯು ।
ಮಿಂದು ನಿನ್ನಯ ಪುಣ್ಯ ಬಹು ಹೆ।
ಚ್ಚಿಂದು ವರ್ಣಿಸಿ ಕೋಡಿಗೆಳೆಯದಿರಾರನೆಂತೆಂದು ॥ ೧೦ ॥

ಈಗಿನಾ ನಾರಿಯರ ಬಾಳ್ವೆಯು ।
ಯೋಗಿಗಳಿಗುಮಸಾಧ್ಯ ತಿಳಿವಡೆ ।
ಬೇಗದಿಂ ಮುಸುಕಿನಲಿ ಮೂವತ್ತಾರು ಮಂದಿಗಳ ॥
ಬಾಗಿ ಮುಖಮಂ ನೋಡಿ ಗರತಿಯ ।
ಸೋಗನುಮೊಡರ್ಚುವರು ಲೋಕದಿ ।
ಛೀಗಳೆದಿವರ ಗುಣಮಂ ಕಲೆಯದಿರುಮೆಂದು ॥ ೧೧ ॥

ಸತಿಗೆ ಪತಿಯೇ ದೇವನೆಂಬುದ ।
ರತಿಯ ಪದ ಸರೋಜವನು ಪೂಜಿಸಿ ।
ಗತಿಯನುಂ ನೀಂ ಪಡಿಯಬೇಕಾ ಭಕ್ತಿಯಂ ಬೆರಸಿ ॥
ಅತುಳ ಶಕ್ತಿಯ ತಾಳಿ ಕುಂಕುಮ ।
ವತಿಪಥಗಳೆಂತೆಂದು ವೈಯ್ಯೊಳು ।
ಮತಿಗಳೆಯುದಿರಿಸಲ್ಕೆ ಬಿಸಜಾಲಯೆಗೆ ಸರಿಯೆಂದು ॥೧೨॥

ಗಂಡನಂಜಿಸಿಯವನಿಗೊಣ ಮೆಣ ।
ಸಿಂಡಿ ತಿನ್ನಿಸಿ ಮಾತು ಕೇಳದೆ ।
ಭಂಡಿಯಾಗಿ ವಿಮಾರ್ಗದಿಂ ವೃಷ್ಟಾನ್ನಮಂ ಜಡಿದು ॥
ಅಂಡಲೆದು ಮನೆ ಕಿಮ್ಮತಂ ಕಳೆ ।
ದುಂಡಮನಿ ಗಳದೆಣಿಕೆ ಗೈಯ್ಯಾ ।
ದಿಂಡೆಯರ ಗುಣ ನಿಗುಚಿ ಗೃಹವ ಸಮೃದ್ಧಿ ಪಡಿಸೆಂದು ॥೧೩॥

ಮೂಳನಿವನೆಂದುಸುರಿ ತಲೆಯಂ ।
ಹೋಳು ಮಾಳ್ಪೆನುಮೆನ್ನೆ ನನ್ನೇಂ ।
ಹೋಳು ಮಾಡುವಿ ಬಾಯ್ಗೆ ಬೀಳ್ವಾವಿಾಸಿ ಹೋಳ್ಮಾಡು ॥
ಥೂಳಮಂ ಹಾರಿಸುವೆ ಪಿತನಿಂ ।
ಕಾಲಮಂ ಮುರಿಸುವೆನುಮೆಂಬಾ ।
ಹಾಳು ಸತಿಯಳು ಹತ್ತು ಹಡೆದೊಡು ನುಡಿಸ ಬೇಡೆಂದು ॥೧೪॥

ಅತ್ತಿಯಾ ನುಡಿ ಕೇಳು ಮಾವಗ ।
ಬುತ್ತಿಯಂ ಕುಡು ಬಾಕುಡನಿಗಂ ।
ತೊತ್ತೆನಿಸು ಕಲಹ ಬಿಡು ವೈಗಳ್ಳತೆಯ ಸುಡು ಬೇಗ ॥
ಚಿತ್ತಮಂ ಶುದ್ಧಿಯನು ಮಾಳ್ಪಾ ।
ಕೃತ್ತಿವಾಸನ ಪೂಜೆಯುಂ ನಡಿ ।
ಸುತ್ತೆ ತತ್ತ್ವದ ಶ್ರವಣಮಂ ಮಾಡುತ್ತಲಿರುಮೆಂದು ॥೧೫॥

ಮುಂದೆ ಪಲದಿನಗಳೆಯೆ ಬಾಳ್ತೆಯು ।
ಚಂದದಿಂ ಸಾಗಿದುದನಿವನಾ ।
ತಂದೆ ತಾಯ್ಗಳು ಕಂಡು ಪಿರ್ಗುತಲಿರ್ದರನವರತ ॥
ಸುಂದರಾಂಗದ ಪೌತ್ರನಂ ಪ್ರಿಯ ।
ಕಂದನಾ ಪೊಟ್ಟೆಯಲಿ ಕಾಂಬದೆ ।
ಯಂಧಕಾಸುರನರಿಯ ನೆನೆಯುತಮಳಿದು ಪೋದರಲಾ ॥ ೧೬ ॥

ಮನೆಯೊಳೀರ್ವರೆಯುಳಿದು ನಿತ್ಯವು ।
ಮಿನಿದು ನುಡಿಯಿಂದೊಬ್ಬರೊಬ್ಬರು ।
ಕುಣಿದು ಪೊಸಸಂಸಾರಮಂ ಮಾಡುವರು ಪೊಡಕರಿಸಿ ॥
ಜನರುಮಿವರುತ್ತಮತೆಯಂ ಕಂ ।
ಡಿನಯಯಿನಿಯಳಿಗಾರಿಹರುಮೊ ।
ಗೆಣೆಯುಮೆಂದಾ ಮನದೊಳಗೆ ಪೊಂದುವರುಮುತ್ಸುಕವ ॥ ೧೭ ॥

ಅತಿಥಿಯಭ್ಯಾಗತರ ತಂದೀ ।
ಯತಿಯು ನಿತ್ಯವು ಪುರ್ಗ್ಗಿ ಪೋಳಿಗಿ ।
ಹಿತದಿಯುಣಬಡಿಸುವನು ಮಿಗೆ ಸ್ವೈರ್ಯ್ಯಣ್ಯಮಂ ತೋರೆದು ॥
ಸತಿಯು ಬೇಸರ ಮಾಡಿಕೊಂಡೊಡು ।
ವ್ಯಥೆಯದಾಳದೆ ತಾನೆಯಡಗಿಯ ।
ರತಿವೆರಿಸಿ ಮಾಡುತ್ತಮುಪಚರಿಪೇಂ ಗೃಹಸ್ಥನಿವ ॥ ೧೮ ॥

ಒಂದು ದಿನ ಶಿವ ಪೂಜೆಯಂ ಬಹು ।
ಚಂದ್ರದಿಂ ನಡಿಸಲ್ಕೆ ವೇಳ್ಯೆಯ ।
ದಂದು ಬಹಳವದಾಗೆ ಮನೆಯೊಳು ಪನಿಯು ನೀರಿಲ್ಲ ॥
ವೆಂದು ವನಿತೆಯುಮರಚಿಕೊಂಡೊಡು ।
ಸಂದ ಗುರುವದನೆನಿತುಮಳುಕದೆ ।
ಸುಂದರಾಂಗಿಯ ಕೂಡ ಕಲಹವನೆಸಗಿದಿರೆಯಾಗ ॥ ೧೯ ॥

ಕೆಲಬದಿಯ ಜನಬಂದರಿಚಿದುದ ।
ನೊಲೆದು ಲಾಲಿಸೆಯಿಒಕೆಯುವರಿಗೆ ।
ತಿಳುಪಿದಳು ನೀರಿಲ್ಲದುದ ತೋರಿದಳು ಬರಿ ಘಟವಮಂ ॥
ತಿಳಿದ ಮಾಮಹಿಮಂಗೆ ನಾವುಂ ।
ತಿಳಪುವದುಮೇನುಂಟು ನಾವೇ ।
ಬಳಿಯ ಭಾವಿಗೆ ಪೋಗಿ ನೀರಂ ತರ್ಪೆವೆಂತೆಂದು ॥೨೦॥

ಒಳಗನ್ಯೈದಾ ಘಟವ ಪಿಡಿಯಲ್ ।
ತುಳುಕುತಿದೆ ತಾಂ ತುಂಬಿ ನೀರಿಂ ।
ದಲಗುಬಾಯಿಯ ಹರವಿಯುಂ ಸಹ ತುಂಬಿ ಚಿಬ್ಬಲದಿ ॥
ನಿಲದೆ ಮುಚ್ಚಿರಿ ಕಂಡು ಪತಿಯಂ ।
ಪಳಿದ ಸತಿಯಂ ತಿಟ್ಟ ನೋಡಿದು ।
ಚಲುವ ಸದ್ಗುರುವರನ ಮಹಿಮೆ ಪ್ರತಾಪವೆಂತೆಂದರ್ ॥೨೧॥

ನೋಡಿಯಣುಗೆಯು ಮಣಿದು ಪಾದಕೆ ।
ಬೇಡಿದಳ್ ಕ್ಷಮೆಯಂ ವಿಬುಧನಿಂ ।
ನಾಡೆ ನೀನೇ ದೇವನೆಂಬುದನರಿದೆ ನಾನಿಂದು ॥
ಬಾಡದೊಳು ನೀನಿರ್ದುಕೊಂಡೊಡು ।
ನಾಡನುಂ ಕೈಲಾಸ ಮಾಳ್ಪೆಯು ।
ತಾಡನುಂ ಕುಟ್ಟುತ್ತಲಿರ್ಪಾಜೀವರಂ ಕರೆದು ॥೨೨॥

ನಿಮ್ಮಯಿಒಕೃತಿಯಿಂದೆ ನಿರ್ಮಳ ।
ಬ್ರಹ್ಮ ಸುಖಮುಂ ಲಭಿಸದೆಂದಿಗು ।
ಹಮ್ಮನಳಿದಾ ಸೊಮ್ಮು ಪಡೆವೊಡೆ ಶಾಂತಿಯುದ್ಭವಿಸಿ ।
ಸಮ್ಮುದವು ಕೈಸಾರ್ದು ಮನದೊಳು ।
ಹಮ್ಮಿದಾ ಸಂಸಾರ ಸರಿದುಂ ।
ಪೊಮ್ಮದಪುಮೆಂದೆನಿಸಿ ಬಾಳ್ವಿರಿಯೆಂದು ಬೋಧಿಸುವೆ ॥೨೩॥

ಮಾನವರು ತಾವೇನು ಬಲ್ಲರು ।
ಜ್ಞಾನಿಯಾಟವ ಹಾನಿ ಲಾಭವ ।
ಕಾಣದೆನಿತುಂ ನಡೆಯುತಿಹ ನರ ವೇಷಮಂ ಧರಿಸಿ ॥
ಏನುಗೈದೊಡು ಸಾಕ್ಷಿಯಾಗಿಯೆ ।
ಮೇಣು ಬರ್ದುಂಕುವನು ಲೋಕದಿ ।
ಕಾಣುವಿಕೆ ಬಿಟ್ಟವಗೆ ಸಮವಾರೆಂದು ಬೋಧಿಸುವೆ ॥ ೧೪ ॥

ಇರಲಿದಿಲ್ಲಿಗೆ ಮುಂದೆ ಸತಿಪತಿ ।
ಪಿರಿದು ಪ್ರಾಮಾಣ್ಯತೆಯ ಪೊರ್ಮುತ ।
ಮೆರೆಯುತಿರೆ ವರ ಗರ್ಭಮಂ ಧರಿಸಿದಳು ಸೌಷ್ಠವದಿ ॥
ನೆರೆದವರು ಬಯಕೆಗಳ ತಿನಿಸಂ ।
ಸುರಿಸುತಂ ಹೂಮುಡಿಸಿ ಮೇಲಾ ।
ಚರಣೆಯಂ ಬಹ್ವಾಚರಿಸಿದರು ರೀತಿಗನುಸರಿಸಿ ॥ ೧೫ ॥

ದಾನಮಂ ಮಾಡುವಳು ಕರದಿಂ ।
ಜ್ಞಾನಮಂ ತಿಳಿಯುವಳು ಮನದಿಂ ।
ಪಾಣಿಯಂ ಜೋಡಿಸುತ ಪೊಡಮಡುತಿಹಳು ಸುಜನರ್ಗೆ ॥
ವಾಣಿಯಂ ತಿರ್ದುವಳು ಮತಿಯಿಂ ।
ದೀನರಂ ಪೊರೆಯುವಳು ಧನದಿಂ ।
ತಾನೊಳಗೆ ಮೂಡಿರ್ಪ ಮಗುಗೀಗುಣವು ಬರಲೆಂದು ॥ ೧೬ ॥

ಹಸಿರು ಗಟ್ಟಿದ ಪಲ್ಲ ಬೆಳ್ಳಗಿ ।
ರಿಸುತೆ ಜಳಕಮುಮಂ ಮುಗಿಸುತಂ ।
ರಸಿಕವಾದಾ ಸ್ವಚ್ಛ ಬಟ್ಟೆಯನುಟ್ಟು ಪ್ರೇಮದೊಳು ॥
ಅಸತಿ ಗುಣಮಂ ತೊರೆದು ತನ್ನಂ ।
ತೆಸೆವ ಕೂಸಂ ಪಡೆಯುವಂಥಭಿ ।
ಲಸತೆಯಂ ಪ್ರಕಟಿಪಳು ವಲ್ಲಭನೆದರು ಸಂಭ್ರಮದಿ ॥ ೧೭ ॥

ಕಡೆಗವೊಂದಿನ ಬೇನೆಯಂ ಶಿಂ ।
ದಡಗಣಿಸದಾ ಚಲು ಕುವರಿಯಂ ।
ಪಡೆದಳುಂ ಮಾರಾಣಿ ಮಂಜುಳವಾಣಿ ಶುಭ ದಿನದಿ ॥
ಹುಡಿಗೆಯಂದವನಾಗವೀಕ್ಷಿಸಿ ।
ಕಡು ಹರುಷವಮಂ ತಾಳ್ದ ಸಿದ್ಧನು ।
ಪೊಡವಿಯೊಳಗೀಬಾಲೆಯುಂ ಕೋಡಿಡುವಳೆಂತೆಂದು ॥ ೨೮ ॥

ತಂದೆ ತಾಯ್ಗಳ ಋಣವುಮಿಲ್ಲಿಗೆ ।
ಸಂದಿಸಿತು ನಾನಿನ್ನು ನಿವ್ವಳ ।
ಸುಂದರಿವನುಂ ಪಡೆದು ಮಾಯಾ ಮದವನುಂ ನೂಂಕಿ ॥
ಸಂದ ಸದ್ಗುರುನಾಥನಾ ಕೃಪೆ ।
ಯಿಂದೆ ಭವಮಂ ಗೆಲ್ದು ನಿಲ್ಲುವ ।
ಚಂದದಿರವನುವೆಂದು ಕಾಂಬೆನೊವೆಂದು ಚಿಂತಿಪನು ॥ ೨೯ ॥

ಜಯತು ಪರಮೇಶ್ವರ ಸುಧಾಕರ ।
ಜಯತು ಪಾಪ ವಿನಾಶಕರ ಹರ ।
ಜಯ ಮನೋಜ ಭಯಂಕರ ಪರಾತ್ಪರ ನಿರಾಕಾರ ॥
ಅಯನವಮಂ ನೆರೆ ಕಂಡು ನಿನ್ನಯ ।
ದಯದಿ ಸಂಸಾರಾಂಬುಧಿಯನುಂ ।
ಭಯವದಿಲ್ಲದೆಯೀಸಿ ಪಾರಾಗುವೆನುಮವಿಕಾರ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮಠ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೩ನೇ ಅಧ್ಯಾಯವು ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೧೧೧

# ೪ನೇ ಅಧ್ಯಾಯ

**ಸೂಚನೆ :**

ಸಾಧುವಜ್ಜನು ವಿರತಿಯಂ ಮಿಗೆ ।
ಮೈದು ಸಿದ್ಧಾರೂಢರಾ ಬಳಿ ।
ಸಾರ್ದುದಂ ಬರೆಯುವೆನು ವಿಜ್ಞಾನಾತ್ಮರೊಲಿವಂತೆ ॥ ಪಲ್ಲ ॥

ಭವ ನಿಗಳದಟತಟಿಯಮಂ ಕಳೆ ।
ಭವ ಜಳಧಿಯಾ ತಡಿಗೆ ಸಾರ್ಚೀ ।
ಭವ ಗಹನದುಪಧಿಯನು ಕಿಡಿಸು ಭವಾಂತಕನೆ ನಿನ್ನಾ ॥
ಭವನಮಂ ಸೇರಿಸುತ್ತಮೆನ್ನಂ ।
ಜವದಿ ನಿನ್ನಯ ತೆರನು ಮಾಡುತೆ ।
ಭವ ದವಾಗ್ನಿಯಲಿಂದೆ ತಾರಿಸು ತಂದೆ ಪುರಮಥನಾ ॥ ೧ ॥

ಸಾಧುವಾಗ್ವುದು ಹಗುರುಮೆಲ್ಲೆಡೆ ।
ಸ್ವಾದದೂಟವ ಜಡೆದು ಕುತನಿಯ ।
ಗಾದಿ ಮೇಲೆಯು ಬಿದ್ದು ಸುಖದಿಂ ನಿದ್ರೆಯಂ ಪೊಡೆದು ॥
ಐದೆ ಮೈಗಳ್ಳತೆಯನಾಂತುಂ ।
ಸೇದಿ ಲಂಗೋಟಿಯನು ಪಾಕುತೆ ।
ಬಾಧೆಯಂ ನೆರೆ ಸೋಂಕರೆಂಬಗು ಮುದವನಿಡು ದೇವ ॥ ೨ ॥

ಒಂದು ದಿನವೀಸಾಧುವರ್ಯನು ।
ಸುಂದರಾಂಗಿಯ ಕರೆದು ಬೋಳೈ ।
ಸಿಂದು ಮನೆಯಂ ಬಿಟ್ಟು ಮುನಿವರನಾಗಿ ಪೋಗುತ್ತೆ ॥
ಅಂದವಾದಾ ಬ್ರಹ್ಮದಿರವಂ ।
ನಂದದಿಂ ತಿಳುಪುತ್ತಮೆನ್ನಯ ।
ಬಂಧವಂ ಬೀಳಿಸುವ ಗುರುಪದ ಸೇರುವೆನುಮೆಂದ ॥ ೩ ॥

ಕಂಡುದಂ ಧಿಟವೆಂಬ ಮತಿಯಾ ।
ಕೊಂಡಿಯನ್ನು ಕಳಲ್ಚಿ ಸೌಖ್ಯದ ।
ಹೊಂಡವಮಂ ಹೊಗರೇಳ್ದು ಪುಗಿಸುವ ಸತ್ಯ ಸದ್ಗುರುವ ॥
ಅಂಡಿಸುತ ಪೊಜೀವ ಗುಣಮಂ ।
ದಂಡಿಸುತ ಸಂಸಾರ ಸಾಗರ ।
ದಂಡೆಯಂ ಕಾಂಬುತ್ತ ಸಾರ್ಥಕ ವಾಗ್ವೆ ನಾನೆಂದ ॥ ೪ ॥

ಕೇಳಿ ಸತಿಯಳು ವಿಸ್ಮಯವನುಂ ।
ತಾಳಿ ನನ್ನಂ ತ್ಯಜಿಸಿ ಪೋಗುವ ।
ಪಾಳು ಮಾರ್ಗದ ನಡೆಯು ಲೇಸಲ್ಲೆಂದು ದುಃಖಿಸುತ ।
ಕಾಲ ಮೇಲೆಯು ಬಿದ್ದು ಸುರಿದೊಡು ।
ಲೋಲನಾಗದೆ ಕಾಲ್ಗೆಡದೆಯಸು ।
ಕೂಲಮಂ ತೋರಿದೊಡು ನಿಲ್ಲದೆ ಪೊರಮಡುವೆನೆಂದ ॥ ೫ ॥

ಊರ ತುಂಬೀ ವಾರ್ತೆ ಪರ್ಬಿದೊ ।
ಡಾರವಾರವುಮೆದ್ದು ಪ್ಪಾರತ ।
ರಾರಯಿಪುದಕವಾಲಯಕೆ ಬಂದರು ಸುತೇರ್ಕೈಸಿ ॥
ಗೌರವಾನ್ವಿತನಿಂಗೆರಗುತಂ ।
ಜಾರ ಬೇಡೀಯೂರಿನಿಂ ನೀಂ ।
ಕೈರವದ ತನಿಗಂಪು ಬೆರೆದೆಲರೆಂದು ಬೆಸಸಿದರು ॥ ೬ ॥

ಸಾಧು ಮಾರ್ಗದೊಳೇನಿಹುದು ನೀ ।
ನಾದರದೊಳದನನುಕರಿಸೆ ನಿಜ ।
ವಾದ ಸೌಖ್ಯಮುಮಂ ತೊರೆದು ನಿರಸಾನ್ನಮಂ ಪೊಂದಿ ।
ಬೂದಿಯಂ ಮಿಗೆ ಬಳಿದು ಹಸ್ತದಿ ।
ನಾದಗೈಯ್ವುದಕೇಕದಾರಿಯ ।
ಮೋದದಿಂದಲಿ ಪಿಡಿಯೆ ಸುಖವೇ ಎಂದು ತೆಗಳಿದರು ॥ ೭ ॥

ಮನೆಯೊಳು ಮರಾಳ ಗಮನೆಯರಾ ।
ನನದ ಸೊಂಪು ಸುನಾದವಿಂಪು ವ ।
ಚನದ ಸವಿಮಯ ಕಂಪು ಮಕ್ಕಳ ರಂಪು ಬಂಧುಗಳು ॥
ಅನುಪಮದ ನಗೆತಂಪುಮನುದಿನ ।
ವುಣಿಸು ತಿನಿಸಿನ ಪೆಂಪು ಸಂಭ್ರಮ ।
ವಿನಿತಿರಲಿವನುಳಿದವ ಬರ್ಬರನೆಂದು ಪೇಳಿದರು ॥ ೮ ॥

ನಿಮಗೆ ವ್ಯಹೃತಿ ಜ್ಞಾನ ವಿಲ್ಲೆಂ ।
ದೆಮಗಮನಿಸಿಹುದಿದರಿರವನುಂ ।
ತಮಗೆ ಮನವರಿಕೆನಿಸುವಂತೆಯು ಬಿತ್ತರಿಪೆವೀಗ ॥
ರಮಣ ರಮಣಿಗಳಿರುವ ಗೃಹವಂ ।
ಸಮಯಮಂ ಸಾಧಿಸುತ ಶಿವನುಂ ।
ಸಮತಳಿಸಿಯಿಷ್ಟವನು ಸಲಿಸಿದನೆಂದು ಪೇಳಿದರು ॥ ೯ ॥

ಧನ್ಯ ಧನ್ಯ ಗೃಹಸ್ಥ ಧರ್ಮವು ।
ಧನ್ಯವುಂ ಮಿಗೆ ಮದುವೆ ಮುಂಜೆಯು ।
ಪುಣ್ಯವುಂ ಬಹುಪುತ್ರರಂ ಪಡೆಯುವದುಮುಂಬುವದು ।
ಧನ್ಯವುಂ ಬಳಗದಲಿ ಸಾಯ್ವುದು ।
ಮನ್ಯರಿಗಿದಾಸಾಧ್ಯವಿದರಿಂ ।
ಧನ್ಯರಾದರುಮತ್ರಿಋಷಿಗಳುಮೆಂದು ಪೇಳಿದರು ॥ ೧೦ ॥

ಆರ ನುಡಿಯಂ ಲಕ್ಷ್ಯದೊಳಗಂ ।
ತಾರದಲೆ ಸತಿಗೊಂದು ಮನೆಯಂ ।
ಧೀರನೀತನುಮಿತ್ತು ತಾನಿರ್ಪಾಗರವ ಸುಟ್ಟು ॥
ತೋರ ಕೈಪವ ಧರಿಸಿ ವಲ್ಲಿಯ ।
ಚೂರನುಂ ಜೋಳಿಗೆಯ ಗೈಯ್ಯುತೆ ।
ವಾರಿಗೆಯರಾಗಮಿಸಿ ತಡೆದೊಡು ಬಳಗವುಂ ಬಿಟ್ಟು ॥ ೧೧ ॥

ಓಣಿ ಓಣೆಯೊಳಲೆದು ಜನಗಳ ।
ಕೂನಮಂ ಪಿಡಿಯದಲೆ ಭಿಕ್ಷೆಯ ।
ಪಾಣಿಯಂ ಮಿಗೆ ಚಾಚಿ ಬೇಳ್ಪಂ ಮಾನವಮಂ ತೊರೆದು ॥
ಆನನವನೀಕ್ಷಿಸುತ ಪಿರಿಯಜ ।
ಮಾನರೀತನ ಕಂಡುಮುರಿಯುತ ।
ಮಾನತರ್ಥುವಾಗದಲೆ ಕಳಿಪರು ನೀಡದೇನೊಂದ ॥ ೧೬ ॥

ಮರಳಿ ಪೆಂಡತಿಯಿರ್ಪ ಮನೆ ಗೈ ।
ತರುಣಿ ಸಲೆ ನಾಚಿಕೆಯನುಂ ತಾಂ ।
ತೊರೆದು ರಾಗದಿ ಭವತಿ ಭಿಕ್ಷಾಂ ದೇಹಿಯನಲಾಗ ॥
ಎರೆಯನಾಧ್ವನಿಯಂ ಗುರುತಿಸೀ ।
ಹರದೆಯಳು ನೀಡಿದಳುಮಿೊತಗ ।
ಬರುವೆ ನಿಮ್ಮಯ ಸಂಗಡಾನುಂ ಬಳಿಕಮಿಂತುಸುರೆ ॥ ೧೩ ॥

ನೀನುಮಿಲ್ಲಿಯೆ ವಾಸಮಾಡುತ ।
ಮಾನಭಾತ್ಮನಮುಸ್ಯೆಯಂ ನಡಿ ।
ಸಾನುರಾಗದಿ ಮಾಡಿ ಮುದಮಂ ಪಡೆದು ಸ್ತ್ರೀಯರೊಳು ॥
ಮಾನಮಂ ಬಲ್ವಂತು ಗ್ರಾಮದಿ ।
ಜಾಣೆಯೆಂದೆನಿಸುತ್ತೆ ನಡಿದೊಡೆ ।
ತಾನೆ ಶಿವಸಾಯುಜ್ಯ ಪದಮುಂ ಬಂದಪುದುಮೆಂದ ॥ ೧೪ ॥

ಮುಂದೆಯೂರಂ ತ್ಯಜಿಸಿ ಪೊರಟುಂ ।
ಸಂದ ಸದ್ಗುರುನಾಥನಂ ನಾ ।
ನೆಂದು ಕಾಂಬೆನೊ ಎಂದು ವೈರಾಗ್ಯದಲಿ ನಡದಿರಲು ॥
ಸಿಂದಿಗಿಯ ತಾಲೂಕಿನೊಳಗಿನ ।
ದೊಂದು ಪಳ್ಳಿಯ ಸೇರಿ ಭಿಕ್ಷೆಯ ।
ನಂದು ಬೇಡಿದನೀತ ಸಿಟ್ಟನ ಜರಡೆಯಂ ಕಂಡು ॥ ೧೫ ॥

ಅಮ್ಮನವರೇ ಅನ್ನಮಂ ಕುಡಿ ।
ರೆಮ್ಮ ಪೊಟ್ಟೆಯು ಹಸಿದಿವೆನೆ ಕೇ ।
ಳ್ದಮ್ಮದದಿ ಯಾ ಜರತೆಯಣಕಪನಾಡಿದಳ್ ಯತಿಗೆ ॥
ಅಮ್ಮನೆಂಬುವೆ ನಿನ್ನ ಅಜ್ಜನ ।
ರಮ್ಯವಾದಾ ಮಡದಿಯೇ ನಾಂ ।
ಸುಮ್ಮನೇ ನೀಂ ಪೋಗು ಹಲ್ಲನು ಮುರಿಸಿಕೊಳಬೇಡ ॥ ೧೬ ॥

ಕೂಳು ಕೇಳವನಾವಲೋ ತವ ।
ಹಾಳು ಮೋರೆಗೆ ಬೆಂಕಿ ಹಚ್ಚಲಿ ।
ಕಾಲು ಕೈಗಳು ಸೇದಿರುವವೋ ಮುರಿದು ಬಿದ್ದಿಹವೋ ॥
ಊಳಿಗವ ಮಾಡದಲೆ ತಪ್ಪಿಸಿ ।
ಜೋಳಿಗೆಯ ಪಾಕಿರುವೆ ಬಗಲೊಳು ।
ಗೂಳಿಯಾಗಿಹೆ ದುಡಿದುತಿಂಬಲು ದಾಡಿಯೇ ನಿನಗೆ ॥ ೧೭ ॥

ಒಲೆಯ ಮೇಲೆಯು ರೊಟ್ಟಿ ಹಂಚನು ।
ಬೆಳಗಿ ನಾವಿಟ್ಟಿಲ್ಲ ನಿನ್ನಯ ।
ಚಲುವ ಬಾಯೊಳುಮುನ್ನ ಸಾಕುವ ಹೊಣೆಯ ಹೊತ್ತಿಲ್ಲ ॥
ತಿಳಿಯಬಾರನೆ ಮಿಗೆ ಪರಾನ್ನವ ।
ಮೆಲೆಯಬಾರದುಮೆಂಬುದಂ ನೀಂ ।
ತಲೆಯು ಕೆಟ್ಟವನಂತೆಯೇತಕೆ ನಿಂತೆ ಪೋಗೆನ್ನೆ ॥ ೧೮ ॥

ಒಳಗೆ ಸೊಸಿಯಾ ಜಗಳಮಂ ಕೇ ।
ಳ್ದಳುಕುತತ್ತೆಗಮೊಂದು ರೊಟ್ಟಿಯ ।
ನಳುಗಿ ಪಲ್ಲೆಯ ಹಚ್ಚಿ ಕೊಡುವವನತ್ತೆಯುಂ ನೋಡಿ ॥
ಅಳಿಸಿನಿಂ ಕಸಗೊಳ್ಳುವದಕಂ ।
ಲಲಿತ ಕರಮಂ ಚಾಚಿ ಬರುತಿರೆ ।
ಬಳಿಯ ರುಬ್ಬುವ ಗುಂಡನೆಡವುತ ಕಂಭಕಂ ಹಾಯ್ದು ॥ ೧೯ ॥

ತಲೆಯೊಡೆದು ಕಣ್ದಿರುಗಿ ಕಟ್ಟಿಯ ।
ಕೆಳಗೆ ಮಲಗಿದ ನಾಯಿ ಮೇಲೆಯು ।
ಮಲುಗಿ ಥೊಪ್ಪನೆ ಬೀಳೆ ಕಚ್ಚಿತು ಚಪ್ಪೆಯಂ ಪಿಡಿದು ॥
ಅಲಸಿನಿಂ ಪಿಂದಕ್ಕೆ ಸರಿಯಲ್ ।
ಮಲಗಿದೆಮ್ಮೆಯು ಮೆದ್ದು ಕಾಲಿಂ ।
ಮೆಲುಕಿನಾಮೇಲ್ ಝಾಡಿಸೊದೆಯಲ್ ಸತ್ತೆನೆಂದೆನುತೆ ॥ ೨೦ ॥

ಚೀರಿ ಎಲೆಲೇ ರೊಟ್ಟಿಯಂ ನೀ ।
ನೂರುಡಾಳಗೆ ಕೊಡವಿಯಾ ತಡೆ ।
ಚೂರಿಯಿಂ ತವ ಪೇರ್ಮುಡಿಯನುಂ ಕೊಯ್ವೆನೆಂದೆನುತೆ ॥
ತೋರ ಕೈಗಳ ನೆತ್ತಿ ಬರೆಯವು ।
ಸಾರ ಗಗನದಿ ನಿಲಲು ಜರಠೆಯು ।
ಮಾರವಾರವ ಮಾಡಿದಳು ಕೈನಿಂತುದಂ ತಿಳಿದು ॥ ೨೧ ॥

ಇಳವ ಬನ್ನಿರೊ ಎನ್ನ ಕೈಗಳ ।
ಕೆಳಗೆ ಬಾರವು ನೋಡ ಬನ್ನಿರೋ ।
ಮುಳುವುಮಾದನು ದುಷ್ಟ ನೀ ಸನ್ಯಾಸಿಯಿಂದೆಂದು ।
ಮುಳಿದು ನಿಲೆ ಮಿಗೆ ಕೂಡಿದವರುಂ ।
ತಿಳಿದುಮೀವ್ಯವಹಾರವಮಂ ತಾ ।
ವುಳಿಸ ಬೇಕೀಜರಠೆಯಂ ನೀವೆಂದು ಕಾಲ್ಗೆರಗಿ ॥ ೨೨ ॥

ಬೇಡಿಕೊಳೆ ನಸುನಕ್ಕು ಮುನಿಯುಂ ।
ಕೇಡನೆಸಗಿದ ಜರಠೆಯಂ ಪಿಂ ।
ದೂಡಿ ನಡೆಯೊಳಗೆಂದು ಕೈಗಳನಿಳಿಸಿ ಕಳುಪಿಪನು ॥
ನೋಡಿದಾಜನ ಯೋಗಿಯಂ ಕೊಂ ।
ಡಾಡಿ ನಮ್ಮಯ ಜನ್ಮಮಂ ನೀ ।
ತೀಡಿ ಭವ ಬಿಡುಗಡೆಗೆ ಬಂದವನೆಂದುಮುಸುರಿದರು ॥ ೨೩ ॥

ಕಡೆಗವಮಾವೂರುಳಿದುಮಳೆಯುತೆ ।
ನಡೆದು ಬಂದಂ ಪೂಜ್ಯರಾದಾ ।
ಮೃಡ ಸರೂಪದ ಸ್ವಾಮಿ ಸಿದ್ಧಾರೂಢರಲ್ಲಿಂಗೆ ॥
ಅಡಿಗೆರಗಿ ತಾಣವನು ಕೇಳಲ್ ।
ಬಿಡದೆ ನೀನಿಲ್ಲಿಂದವಿಾಗಳೆ ।
ಬಡಗಲವ ವಿಕ್ಕಂಗೆ ಪೋಗಲ್ಲೊಬ್ಬ ಸದ್ಗುರುವು ॥ ೨೪ ॥

ನಿನ್ನ ದಾರಿಯ ನೋಡುತಿಹನುಂ ।
ಧನ್ಯನವನಿಂ ಸಕಲ ಶಾಸ್ತ್ರವ ।
ನುನ್ನಿಸಿಯುವರೊಲು ನಡೆದು ನೀನುದ್ಧಾರವಾಗೆಂದು ॥
ಚೆನ್ನವಾದಾಶಿಷವ ಕುಡುವುತ ।
ಬೆನ್ನ ಪಿಂದಂ ಕಳಿಸ ಪೋದಂ ।
ಮಾನ್ಯನಲ್ಲವೆ ಯತಿಯ ಪ್ರೀತಿಯ ಗಳಿಸಿದೀ ಮುನಿಪಂ ॥ ೨೫ ॥

ಆವ ಜನ್ಮದ ಪುಣ್ಯವೋ ತಾ ।
ನಾವರಿಸಿ ಜನಗಳ್ಗೆ ಸದ್ಗುರು ।
ದೇವನಾ ದರ್ಶನವ ಮಾಡಿಸುತಿಹುದುಮೆಂಬುತಿರೆ ॥
ಆವುಕನ ವೊಲು ಕಳಿಸ ಬಂದುದು ।
ಮಾವಗಂ ಮಹಾತ್ಮ್ಯ ತೋರ್ಪುದು ।
ಪೂವಿನೋಲಿಹ ಸಾಧುನಜ್ಜಗನೂರು ಸರಿಯಿಹರು ॥ ೨೬ ॥

ಈತನದ್ಭುತ ವಿರತಿಯುಂ ಕಂ ।
ಡೀತನಾ ನಿಜ ತಪದಿರವನುಂ ।
ಪೂತ ಬ್ರಹ್ಮಜ್ಞಾನದಾಸೆಯ ನೋಡಿದೊಡೆ ಜಗಕೆ ॥
ಆತಪನನೇಯಿಳಿದುಬಂದಿ ।
ರ್ಪೀತನೇ ಜೀವರ್ಕಳಾಸರ ।
ನಾತುಮವ ಪ್ರತ್ಯಕ್ಷ ತೋರಿಪನೆಂದುಮೆನಿಸುವದು ॥ ೨೭ ॥

ಎಲ್ಲೆ ಕೂತೊಡು ಲಕ್ಷ್ಯಮಂ ಪರ ।
ದಲ್ಲಿಯೇ ಸೆಕ್ಕಿಸುತೆ ಜಗದಾ ।
ಸಲ್ಲವಡಗಿಸಿ ತನ್ನ ತಾನೇಯಿರ್ಪನಾ ಮೇಲೆ ॥
ಅಲ್ಲಗಳೆದೀ ಹೇಸಿ ಭವಮಂ ।
ತಲ್ಲಣವಗೊಳ್ಳದಲೆ ಧೈರ್ಯದಿ ।
ಬಲ್ಲವರನೊಡವೆರಿಸಿ ಬಾಳುವನೆಂದುಮೆನಿಸುವದು ॥ ೮ ॥

ಜೀವ ಪರಮರ ಭೇದಮಂ ಸಂ ।
ಭಾವಿಸದೆ ವೇದಾಂತ ಶಾಸ್ತ್ರವ ।
ಸಾವರಿಸಿ ದಾಸೋಹಮೆಂದುಂ ಸಾರ್ಚಿ ಭವದಿರವ ॥
ಕೋವಿದಿರ್ದೊಡು ಗರ್ವವಿಲ್ಲದೆ ।
ಸಾವಧಾನದಿ ನಿಜವರಿದು ಮಾ ।
ಯಾ ವಿಲಾಸದ ನೆಲೆಯನೆಂದಿಗು ನೋಡನೆನಿಸುವದು ॥ ೯ ॥

ಭೂಮಿಯಂ ಗದ್ದುಗೆಯ ಮಾಡಿ ವಿ ।
ರಾಮದಿಂ ಜೀವಾತ್ಮ ಕುಳಮಂ ।
ಪ್ರೇಮದಾ ದೇವರನು ಮಾಡುತೆ ಚಂದ್ರ ಸೂರ್ಯರನು ॥
ಆಮರಣ ಬೆಳಗಲಿಕೆ ಹಚ್ಚಿದ ।
ನಾಮುದದಿ ಖಗ ಹಾಡ ಹಚ್ಚಿದ ।
ನಾಮನೋಜಹರ ಪದವೆಮ್ಮಂ ಕಾಯಲನುದಿನವು ॥ ೧೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೪ನೇ ಅಧ್ಯಾಯವು ಮುಗಿದುದು ॥

— ಶುಭ: —

ಒಟ್ಟು ನುಡಿಗಳು [illegible]

# ೫ ನೇ ಅಧ್ಯಾಯ

**ಸೂಚನೆ :**

ಮೆರೆವ ಬನ್ನಟ್ಟಿಯಲಿ ಸದ್ಗುರು ।
ವರನುಮೆನ್ನಿಪ ರುದ್ರ ದೇವರ ।
ಪರಮ ಹಸ್ತಿಕನಾದನುಂ ಗುಡಿಸಾಗರಾಧೀಶ ॥ ಪಲ್ಲ ॥

ಹರವಿಯಾ ಹಂಚುಗಳುಮಗ್ನಿಯ ।
ವುರಿವ ಕಿಡಿಗಳು ಸ್ವರ್ಣತುಣುಕುಗ ।
ಳಿರುತಿಹವು ಮಿಗೆ ತಮ್ಮ ಮೂಲಾಕಾರಮಂ ಬಿಡದೆ ॥
ಧರೆಯ ವಸ್ತುಗಳಿದರ ಪರಿಯಿರೆ ।
ಹರನೆ ನೀನೇ ಮೂಲನದರಿಂ ।
ಚರಣಮಂ ತವ ನರ್ಚಿಬಾಳುವೆನುದ್ಧರಿಸುಮೆನ್ನ ॥ ೧ ॥

ಉಂಡು ಕೂತುಕೊ ಸುಮ್ಮನೆಂದೊಡೆ ।
ಕಂಡ ಕಾರ್ಯಕೆ ಕೈಯ್ಯ ಹಾಕುವೆ ।
ಭಂಡರಾ ಬೆನ್ಹತ್ತಿ ನೀನುಂ ಭಂಡನಾಗುವಿಯೋ ॥
ಉಂಡಿಯುಸುಳಿಯ ತಿಂಬ ಮುನಿಗಳ ।
ಹಿಂಡಿನಲಿಯೊಡಗೊಳ್ದು ಮುಗ್ಗಲ ।
ಗೊಂಡು ನಿಂತೊಡೆ ಸುಖವೆ ಎಂಬಾತನನು ಪೊರೆ ಶಿವನೆ ॥ ೨ ॥

ಮುಂದೆ ಹುಬ್ಬಳ್ಳಿಯನು ತೊರೆದೀ ।
ನಂದ್ಯನುತ್ತರ ದಿಕ್ಕಿನಾ ಕಡೆ ।
ಚಂದದಿಂದಲಿ ನಡೆದು ಬರೆ ಬನ್ನಟ್ಟಿ ಸೀಮೆಯಲಿ ॥
ಅಂದವಾದಾ ಪಾದ ಪಾಣಿಗ ।
ಳಂದು ಹರಿತೊಡಗಿದವು ಜೋರಿಂ ।
ದೊಂದಿನಿತು ಹೆಜ್ಜೆಯನು ಕಿತ್ತಿಡದಾದನಾ ಕ್ಷಣದಿ ॥ ೩ ॥

ತಲೆಯು ಧಿಮಿಧಿಮಿಯೆಂಬು ಕಂಗ ।
ತ್ರ್ತಲೆಯು ವರ್ಧಿಸಿ ತಿರುಗಿದಂತೆಯು ।
ನೊಳಗೆಯಾಗಲ್ ಮನದ ಶಾಂತತೆಯಳಿದು ಕುಳಿತುಕೊಳೆ ॥
ಕೆಲವು ಪೊತ್ತಿನ ಮೇಲೆಯಲ್ಲಿಗೆ ।
ಸಲುವ ನರಗುಂದಕ್ಕವೈದಾ ।
ಚಲುವ ರುದ್ರರ ಶಿಷ್ಯ ಬಂದಂ ಬಿಚ್ಚುಮೆಂಬಾತ ॥೪

ಕುಳಿತುಕೊಂಡಿಹ ಯತಿಯ ಪದಮಂ ।
ನಿಲದೆ ನಮಿಸುತೆ ಲಾಗಿ ಕೇಳ್ದಂ ।
ಚಲುವ ಮುನಿಯೇ ತಾವು ದಾರೀ ಕಡೆಗೆ ಬಂದಿರ್ಪ ॥
ಆಳಿಪುಮಂ ಮನದಿಂದೆ ಪೇಳೆನೆ ।
ಯೊಲೆದು ಸದ್ಗುರುವರನರಸುವದ ।
ಕಲೆವೆ ದೊರೆಯದಲಳುವೆ ಚಿಂತೆಯವಳೆವೆನೆಂತೆಂದ ॥೫

ಕೇಳಿ ಬಿಚ್ಚುಂ ಹಿಗ್ಗಿ ನೀವೀ ।
ಗೇಳರಿಲ್ಲಗವೊಂದು ಮೈಲಿಗೆ ।
ಮೇಲೆನಿಪ ಬನ್ನಟ್ಟಿಯೆಂಬಾ ಗ್ರಾಮುವೊಂದುಂಟು ॥
ಲೀಲೆಯಿಂದಲ್ಲಿಯ ಹಿರೇಮಠ ।
ದಾಳಿಕಾರಂ ರುದ್ರ ದೇವನು ।
ಕಾಳಜಿಯನುಂ ವಹಿಸಿ ನಿಮಗಮಂ ತಿಳಪುವನು ಬಿಡದೆ ॥೬

ಅಲ್ಲಿ ದಿಗ್ದೇಶದ ಮಹಾತ್ಮರು ।
ಬಲ್ಲಿದಿಂದ್ರಿಯ ಗೆಲಿದ ಜಯಿಗಳು ।
ನುಳ್ಳೆದೆಯ ಪೆರ್ಚಿರ್ಪ ಸನ್ಯಾಸಿಗಳು ಸಂಸ್ಕೃತ ॥
ವೆಲ್ಲರಿತ ವಿದುಷರು ಸಮಾಧಿಯ ।
ನುಳ್ಳ ಮಹಿಮರು ರುದ್ರ ಪಾದಜೊ ।
ಳುಳ್ಳುತಿಹರ್ಪ್ಪೆ ಈಗಮದು ಕೈಲಾಸವೆಂತೆಂದ ॥೭

ಪಾರಮಾರ್ಥ ಪ್ರಪಂಚವೆರಡಂ ।
ಸೇರಿಸುತ ನಡೆದು ಪ್ರಪಂಚದ ।
ಭಾರಮಂ ತಾನೀಗಿಳುಹಿ ಯಿರುತಿಹನು ಮಠದೊಳಗೆ ॥
ತೋರಿಪಂ ಪರ ಬ್ರಹ್ಮದಿರವಂ ।
ತಾರಿಪಂ ಸಂಸಾರ ಸಾಗರ ।
ವಾರವಗೆ ಮಾನ್ಯತೆಯನಿಡದವರೆಂದು ವರ್ಣಿಸುತ ॥ ೮ ॥

ಬನ್ನಿರೆನ್ನಯ ಸಂಗಡಲ್ಲಿಗೆ ।
ಧನ್ಯನಂ ತೋರಿಪೆನು ನೀವೀ ।
ಗನ್ಯಕಡೆ ಗಮಿಪುದನುಂ ತೊರೆದೇಳಿರೆಂತೆನ್ನೆ ॥
ಚನ್ನನದನಾಲಿಸುತೆ ಪೊರಡುವ ।
ದನ್ನು ಮಾಡಲು ಮೈಯ್ಯಯೊಳಗಿನ ।
ಬನ್ನವೆಲ್ಲವು ಪರಿಯೆ ಖುಷಿಯಿಂ ಬಂದ ಬನ್ನಟಿಗೆ ॥ ೯ ॥

ಕಂಡಿನಲ್ಲಿಯ ಪೂಜ್ಯ ಮಠಮಂ ।
ಖಂಡ ಭಾವವನಳಿದಖಂಡ ಪ್ರ ।
ಚಂಡ ರವಿಯೊಲು ಗದ್ದುಗೆಯ ಮೇಲ್ ಕುಳಿತ ರುದ್ರರನು ॥
ಅಂಡಿಸೀಕ್ಷಿಸಿಯಿೊತ ಮಾಯೆಯ ।
ಗಂಡನೆಂಬುತೆ ಜವದಿ ದೀರ್ಘದ ।
ದಂಡ ವಂದನೆಯಂ ವಿಶೇಷದಿ ಮಾಡಿ ತಲೆಮೇಲೆ ॥ ೧೦ ॥

ಪ್ರೀತಿಯಿಂ ಪದ ಪೊತ್ತು ಸದ್ಗುರು ।
ನಾಥನಾ ಬಳಿ ಸಾರ್ದ ಶಿಷ್ಯ ।
ವ್ರಾತಕಂ ಸಲೆಯೆರಗಿ ಕುಳಿತಂ ಬಿಚ್ಚುವಿನ ಕಳುಪಿ ॥
ಕೂತ ಯತಿಯಂ ಸ್ವಾಮಿ ರುದ್ರರು ।
ನೂತನಾಡಿಸುತಂ ವಿಚಾರಿಸಿ ।
ಯೇತಕೀ ಕಡೆ ಬಂದೆಯೆಂದೆನೆ ದೇವ ಭವದಿಂದೆ ॥ ೧೧ ॥

ಸೊಂದು ತಪ್ಪುಯ ಬಳಿಗೆ ಬಂದೆನು ।
ಮಿಂದು ತತ್ತ್ವಜ್ಞಾನವರುಪೀ ।
ಮುಂದ ಜನ್ಮವನುದ್ಧರಿಸು ತಡಮಾಡ ಬೇಡೆನ್ನೆ ॥
ಇಂದುವಿನ ಮೈಬಣ್ಣ ಮೂರ್ತಿಯು ।
ಮುಂದಹಾಸವ ಬೀರ್ದು ನಿನಗಂ ।
ನಂದದಿಂ ನಿನ್ನಿಚ್ಛೆಯಂತೆಯೆ ಮಾಳ್ಪೆನೆಂತೆಂದ ॥ ೧೨ ॥

ಮುಂದೆ ಪಾವನ ತತ್ತ್ವಮುಸಿಯಂ ।
ಚಂದದಿಂ ಬಿತ್ತರಿಸಿ ಮುಸುಕಿದ ।
ಮಂದ ಮಾಯಾವರಣಮಂ ನೆರೆ ಸುಟ್ಟು ಭವದಿಂದೆ॥
ಅಂದದಿಂ ಪಾರಾಗ್ವ ಯುಕುತಿಯ ।
ನೆಂದು ನಿನಗಂ ತೋರ್ದು ಸಂತಸ ।
ದಿಂದೆ ಶಿವನಂ ಮಾಳ್ಪೆ ಮೊದಲುಂ ಹಸ್ತಿಕಾಗೆಂಮ ॥ ೧೩ ॥

ಮರುದಿನವೆ ಶಿವಪೂಜೆಗಂ ವರ ।
ಪರಿಮಳದ ಹೂ ಪತ್ರಿಯಕ್ಷದ ।
ಸರವು ಲಿಂಗ ವಿಭೂತಿಯಕ್ಷತೆ ಧೂಪ ದೀಪಗಳಂ ॥
ತರಿಸಿ ಶುಚಿಯಾಗಿರ್ಪಮಿವನಂ ।
ಕರಿಸಿ ಬಿಳಿ ಕಂಬಳಿಯ ಮೇಲೆಯು ।
ಮಿರಿಸಿ ಪದ್ಮಾಸನದಿ ಪೂರ್ವಕೆ ತುಂಡವುಂ ಗೈಸಿ ॥ ೧೪ ॥

ಸರಸ ನ್ಯಾಸಾದಿಯನೊಡರ್ಚುತೆ ।
ವರದ ಕರಮಂ ಶಿರದ ಮೇಲೆಯು ।
ಮಿರಿಸಿ ದಕ್ಷಿಣ ಕರ್ಣದೊಳಗಂ ಪೇಳ್ದ ಮಾಮಂತ್ರ ॥
ಶರಿರಮಂ ಬದಲಿಸಿದ ಸದ್ಗುರು ।
ಹರುಷದಿಂ ಬಲ ಭುಜಕೆ ಲಿಂಗವ ।
ಧರಿಸಬೇಕೆಂಬಾಜ್ಞೆಯಂ ಮಾಡಿದನು ಯತಿವರಗೆ ॥ ೧೫ ॥

ಮುಂದೆ ಪ್ರತಿದಿನ ಮೂರು ವೇಳೈಯು ।
ಬಂಧುರದ ವೇದಾಂತಮಂ ಬಹು ।
ತೊಂದರೆಯನಳಿದರುಪಿದಂ ಬಿನ್ನಾಣಮಂ ವೆರಿಸಿ ॥
ಎಂದಿಗು ಮೆರಡೆಣಿಸದಲೀ ಜಗ ।
ಹಂವರದಿ ಮೆರೆವಂಥ ಬ್ರಹ್ಮದ ।
ಚಂದಿರನೆ ನೀನೆನ್ನೆ ನಿನಗೀ ತಲ್ಲಣೇಕೆಂದ ॥ ೧೬ ॥

ಮೃಗಜಲದಿ ವೈಲಿಗೆಯ ಒಟ್ಟೆಯ ।
ನೊಗೆದು ಬೇಗನೆ ಹಿಂಡಿ ನಾಂ ಬಿಸಿ ।
ಲಿಗೊಣಗಿಸುವೆನುಮೆಂದು ಕುಣಿದೊಡೆ ಲಭ್ಯವಪ್ಪುವುದೇ ॥
ಜಗವುಮಿದರೊಲು ಮಿಥ್ಯೆಮಾಗಿ ವಿ ।
ಲಗವನುಂ ಕುಡದಿಹುದುನಾರಿಗು ।
ಬಗೆಯಲಿಂ ವೈದೋರಿ ಬಗೆಯಿಂ ಬಾಳಿ ಲಯಿಸುವದು ॥ ೧೭ ॥

ನಮ್ಮ ಆತ್ಮವು ಜ್ಞಾನ ಕರ್ತೃವು ।
ನೆಮ್ಮಿ ಕರ್ಮದ ಕರ್ತೃವಲ್ಲವು ।
ಸುಮ್ಮನೇ ಕರ್ಮದಲಿ ಕೊಳೆವುದು ತ್ರಿಜಗ ಪರಿವಾರ ॥
ಮುಮ್ಮಳಿಸಿ ಬ್ರಹ್ಮವನು ತಿಳಿದೊಡೆ ।
ಯುಮ್ಮಳವು ಕತ್ತರಿಸಿ ಮಾಯಾ ।
ಗುಮ್ಮನಂ ಗುಂಡಿಕ್ಕಿ ನಿಜವುಂ ಕಾಣಬಹುದೆಂದ ॥ ೧೮ ॥

ಸ್ವಗತ ಭೇದವುಮಾತ್ಮಗಿಲ್ಲವು ।
ಗಗನದೊಲು ನಿರವಯವನಿಹನುಂ ।
ಮಿಗೆ ಸಜಾತಿಯುಮಿಲ್ಲಮೇಕೆನೆ ಬೇರೆಯಾತ್ಮಿಲ್ಲ ॥
ಬಗೆಯೆ ನಾಡೆ ವಿಜಾತಿಯಿಲ್ಲವು ।
ಸಗುಣವೇ ಮೊದಲಿಲ್ಲಯದರಿಂ ।
ದಗಣಿತಾದಾತ್ಮನಿಗವಿೂಸಂಭೇದ ಮೂರಿಲ್ಲ ॥ ೧೯ ॥

ವಸ್ತುವೆನಿತು ಸಮೀಪವಿಹುದೋ ।
ಸಿಸ್ತುವಿ:ದೊರ್ಡ:ಮನಿತು ಮರೆವುದು ।
ಸುಸ್ಥಿರದ ಪೇರ್ಮನೆಯ ಕಂಭದ ಲಕ್ಷ್ಯವಿಲ್ಲದೊಲು ॥
ಅಸ್ತಿ ಭಾತಿಗಳಿಂದೆಯೊಪ್ಪುವ ।
ದಸ್ತುವಿಸದಾಬ್ರಹ್ಮವತ್ಯಂ ।
ತಸ್ತಿವಾರದಿ ಸಮಿಪಮಿರ್ದೊಡು ಮರೆಯುತಿಹುದೆಂದ ॥ ೨೧

ಚಲುವ ವೊಂದರ್ಥದ ಸು ಕನ್ನೈ ।
ದಿಲೆಯೊಳಗಿನ ಕಪ್ಪು ಪದವುಂ ।
ನಿಲದೆ ಕೆಂಪಂ ಸ್ಯೆದಿಲೆಯ ಪದವುಳಿದ ಕಮಲಗಳ ॥
ಹಳಿವವೊಲು ತತ್ಪದವು ಶೋಕವ ।
ಬಳಿಕಲಾ ತ್ವಂ ಪದವನಾತ್ಮವ ।
ತುಳಿದು ಮಾ ನಿಜವಿರ್ಪೆಯೆಂಬೊಂದರ್ಥೊರಿವವೆಂದ ॥ ೨೨

ಹಾಲಿನೊಳು ನವನೀತಮೆಳ್ಳೊಳು ।
ತೈಲಮಿರ್ಪ್ಪದುಮಂತೆಯುಂ ಹೇ ।
ರಾಳ ಬೆಣ್ಣೆಯು ಬಪ್ಪದೇ ನೀರಿನಲಿ ನೋಡಿದೊಡೆ ॥
ಮೂಲವಾದಾತ್ಮನಲಿ ದೇಹದ ।
ಹೋಳು ಸಹಿತವುಮಿಲ್ಲವೆಂದಿಗು ।
ಜಾಳ ಮನುಜರು ಸುಮ್ಮನೇಯಿಹುದೆನ್ನುತಿಹರೆಂದ ॥ ೨೩

ತೋರುವೀ ತೋರಿಕೆಯ ತುಷಮಂ ।
ತೂರಿ ಮಹದಾದಿಗಳ ಮೂವ ।
ತ್ತಾರು ತತ್ತ್ವದಿ ಮಣಿಗಣದ ಗುಣದಂತೆ ಶೋಭಿಪ್ಪ ॥
ತೋರಿ ತೋರದೆ ವಿಶ್ವಮುಖದೊಳು ।
ಮಾರಿಗುಂ ಗೋಚರಿಸದಿರ್ಪಾ ।
ಮಾರಹನಾರೂಪವೇ ನಾನೆಂದು ತಿಳಿಯೆಂದ ॥ ೨೪

ಒಂಪೆನಿಸಿ ತೋರುವನುಮೆರಡಂ ।
ಪೊಂದಿ ಮೆರೆವಂ ಮೂರು ನಾಲ್ಕನು ।
ಚಂದದಿಂ ತಾನೈದುವಮಾರನು ಬಳಿಸಿ ವಿಭುವಾಗಿ ॥
ಹಿಂದೆ ಮುಂದೆಡಬಲ ಸಮಸ್ತದಿ ।
ನಿಂದು ಮಾಯಾ ಗುಪ್ತನಾದಾ ।
ಯಿಂದುಮೌಳಿಯೆ ನೀನು ತಿಳಿ ಬೇರಿಲ್ಲವೇನೆಂದ ॥ ೨೪ ॥

ಆಲಯಿಸಿ ಗುರು ಬೋಧೆಯಂ ಯತಿ ।
ನೀಲ ಲೋಹಿತನಾಗಿ ಬಳಿಕಂ ।
ಮೂಲ ಸುಖಮಂ ಪೊಂದಿ ಜನನಾದಿಗಳ ಭಯವೆಲ್ಲ ॥
ಧೂಳು ಹಾರಿಸಿ ರುದ್ರ ಪಾದಕೆ ।
ಬೀಳುತಿಲ್ಲಿಯೆ ವಾಸಮಾಳ್ಪೆಂ ।
ದೂಳಿಗದಯಿಚ್ಛೆಯನು ತೋರಿದ ಸದ್ಗುರಾರ್ಯನಿಗೆ ॥ ೨೫ ॥

ಒಪ್ಪಿ ಗುರುಗಳು ಕುದುರೆ ಚಾಕರಿ ।
ತಪ್ಪದೇ ನೀಮಾಡುಮೆಂಬುತ ।
ಮಪ್ಪಯಿಸಿ ನೇಮಿಸಿದರಾಗಳ್ ಸಾಧುವಜ್ಜನಿಗೆ ॥
ದಪ್ಪ ಕಾಯದ ಯೋಗಿಯಿರ್ದೊಡು ।
ಹಪ್ಪಳಿಯು ತಾನಾದ ಕೆಲಸದಿ ।
ಗಪ್ಪನುಪ್ಪುಂಡುದುದು ನೆಪ್ಪಿಗೆ ಬಪ್ಪುದವನಿಂಗೆ ॥ ೨೬ ॥

ಎನಿತು ಮಾನಭಿಮಾನ ಪಿಡಿಯದೆ ।
ಮನದೊಳಿದು ಹೀನೆಂದು ಬಗೆಯದೆ ।
ಮುನಿಯುದಲೆ ಗುರುದೇವರಿಗೆ ಕಡು ಹರ್ಷಮಂ ತಾಳ್ದು ॥
ದಿನ ದಿನಂಗೈಹಚ್ಚಿ ಲದ್ದಿಯ ।
ತುಣುಕುಗಳನುಂ ಬಳಿದು ಪಾಗವ ।
ಮಿಣುಕುವಂತೆಯು ಮಾಳ್ಪನೆಲ್ಲವ ಬೇಸರಂಗೊಳದೆ ॥ ೨೭ ॥

ನಸುಕಿನೊಳುಪ್ಪವಡೆವಂ ದಿನ ।
ಪಶುಪ ಪದವಂ ಬಿಟ್ಟು ಮಿಸುಕದೆ ।
ಹಸನ ಮನದಿಂ ಸ್ಮರಿಸಿ ಬಳಿಕಂ ನಮಿಸಿ ಗುರುಪದಕೆ ॥
ಕಸವುಸುರಿಯುದ್ಯನುದಿ ಬೆವರುಂ ।
ಬಸಿವವೊಲು ದುಡಿಯುತ್ತೆ ರುದ್ರರ ।
ರಸಿಕ ಶಿಷ್ಯನು ಮೆನಿಸಿ ಮೆರೆವಂ ಬನ್ನಟಿಯ ಮಠದಿ ॥ ೨೮ ॥

ಗುರುಗಳೇರುವ ಕುದುರೆಯಂ ಬಲು ।
ಹರುಷದಿಂ ಪ್ರೈತಿಕ್ಕಿಯದಕಾ ।
ಕರಿಕಿ ರೌದಿಯ ತಂದು ತಿನಿಸುತೆ ನೀರನುಂ ಕುಡಿಸಿ ॥
ಶರಿರಮಂ ಬಲು ಬಲಿಸಿ ಗುರುಗಳ ।
ಕರುಣಮಂ ಬಿಗೆ ಪೊಂದಿ ಶಿಷ್ಯರ ।
ನೆರವಿಯೊಳಗುತ್ತಂಸನಾದೋದ್ರೇಕವಂ ತೋರಿದು ॥ ೨೯ ॥

ಎಂದು ನಿನ್ನಯ ಅಕ್ಕಿ ಕಾಳಿಗೆ ।
ಬಂದು ದೈವದ ಭೋಜನವ ತಾ ।
ವೆಂದುಮುಂಡರುಮೂಯರವ ಮಾಡಿದರುಬೋಜನವು ॥
ಚಂದ ಪಾರ್ವತಿ ಗಂಡನೆಂಬರು ।
ಕಂದನೆಂಬರು ಗಣಪತಿಯನುಂ ।
ಗೊಂದಲವ ಸುಳ್ಳೇ ನಡಿಸುವಿವರನ್ನು ಪೊರೆ ಶಿವನೆ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮದ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೫ನೇ ಅಧ್ಯಾಯವು ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೧೬೧

# ೩ನೇ ಅಧ್ಯಾಯ

**ಸೂಚನೆ :**

ಶ್ರೀಗುರುವೆನಿಪ ರುದ್ರ ದೇವರು ।
ರಾಗದಿಂ ಗುಡಿಸಾಗರದ ಸಾ ।
ಧೂಗಳೆಂಬಭಿಧಾನವಿಟ್ಟುದು ಬರೆವೆ ಪರಿಕಲಿಸಿ ॥ ಪಲ್ಲ ॥

ಸತ್ತ ಮುದುಕಿಯು ನೋಡಿ ಮುದುಕನು ।
ಮತ್ತು ಕರೆವನು ಬಿಕ್ಕಿ ಬಿಕ್ಕಿಯೆ ।
ಮತ್ತೆ ನುಡಿವಂ ನನ್ನ ಬಲಗೈ ಪೋಯಿತೆಂಬುತ್ತ ॥
ನತ್ತು ಗುಂಡಿನ ಟೀಕಿ ಬಳಿ ಕಿ ।
ಮ್ಮತ್ತಿನವು ಧರಿಸುತ ಮೆರೆವವಳು ।
ಸತ್ತಳೆಂದು ಮುಸುರ್ಗರೆವಗುಂ ಶಿವನೆ ಕುಡು ಸುಖವ ॥ ೧ ॥

ಮಣಿಗಳೊಳು ಕೌಸ್ತುಭವು ನದಿಯೊಳು ।
ಪ್ರಣುತ ಗಂಗೆಯು ಚಿಕ್ಕೆಯೊಳಗಂ।
ಕನಿವ ಚಂದ್ರಮ ವೃಕ್ಷ ನಿಚಯು ಬಿಲ್ವ ಪಶುಗಳೊಳು॥
ಅನಡ್ವ ಮೇಲಾದಂತೆ ಸಂಕೀ ।
ರ್ತನೆಯು ಬನ್ನಟ್ಟೆಂಬ ಗ್ರಾಮವು ।
ಮನವರತ ಮೆರೆಯುವದು ಭಾರತದೊಳಗೆ ಮೇಲೆನಿಸಿ ॥ ೨ ॥

ಇಲ್ಲಿಯಾ ಗುರು ರುದ್ರ ದೇವರ ।
ಸಲ್ಲಲಿತ ಚರಣಾರವಿಂದದಿ ।
ಚೆಲ್ವ ಗುಡಿಸಾಗರದ ರಾಮನಗೌಡ ಕುಲಕರ್ಣಿ ।
ಒಳ್ಳೆಯಾ ಚನಬಸಪ ಪಟ್ಟೆದ ।
ಹಳ್ಳಿಕೇರಿಯ ಲಿಂಗಬಸವಪ ।
ರೆಲ್ಲರೊಗ್ಗಾಗುತ್ತೆ ನಡಕೊಳುತಿದ್ದರಳ್ಕಜದಿ ॥ ೩ ॥

ತಮ್ಮಮ್ರೂರೊಳಗೊಮ್ಮೆ ದೇವಿಯ ।
ರಮ್ಯ ಪೌರಾಣವನು ಪಚ್ಚುವ ।
ಹುಮ್ಮಸನುಮಂ ತಾಳ್ದು ಬನ್ನಟ್ಟಿಂಗವ್ವೈದುತ್ತೆ ॥
ಧಮ್ಮಿಯಂ ಕೇಳಿದರು. ನಮ್ಮಗೆ ।
ಬೊಮ್ಮ ತಿಳುಪುವ ಮೂರ್ತಿಯಂ ನೀವ್ ।
ಗುಮ್ಮನೇ ಕಳುಪಿರೆನೆ ಕುದುರೆಯ ಸೇವೆಯೊಳಗಿರ್ದ ॥ ೪ ॥

ಸಾಧುವಜ್ಜನ ಕರೆದು ನೀನುಂ
ಬೋಧಮಂ ಮಾಳ್ಪುದಕೆ ನಾಳಿಗ ।
ವೈದಬೇಕೈ ಚಲ್ವ ಗುಡಿಸಾಗರದ ಗ್ರಾಮಕ್ಕೆ ॥
ಆದಿಕಾರಣನಿಂತೊರೆಯೆಯದ ।
ನಾದರಿಸಿ ಪೊಡಮಟ್ಟು ಸಾಧುವು ।
ಪೋದನೋಂ ತಿಳಿಯದಿರ್ದೊಡು ಬಂದವರನಾಂತು ॥ ೫ ॥

ಮುಂದೆಯುಂ ಪ್ರಾರಂಭ ಮಾಡಿದ ।
ಚಂದ ದೇವಿ ಪುರಾಣವುಂ ತಾವ್ ।
ಬಂದು ಕೂಡಿದರೆಲ್ಲ ಭಕುತರು ಶ್ರವಣ ಮಾಳ್ಪುದಕೆ ॥
ಅಂದು ಶ್ರೀಗುರು ಸಾಧುವಜ್ಜನು ।
ಮಂದದಿಂ ಸದ್ಬೋಧೆಮಾಡಿದು ।
ದಿಂದುಮೊರೆವೆನುಮಾಪ್ರಬುದ್ಧರು ಮೆಚ್ಚಿಕೊಳ್ವಂತೆ ॥ ೬ ॥

ದೇವಿಯೆಂದೊಡೆ ಸ್ತ್ರೀಯುಮಲ್ಲವು ।
ದೇವರೆಂದೊಡೆ ಪುರುಷನಲ್ಲವು ।
ದೇವಿ ಶಬ್ದಕೆ ಮೂಲಧಾತು ದಿವೆಂದು ತಾನಿಹುದು ॥
ಆವುದರ್ಥವುಮಿದಕಮೆಂದೊಡೆ ।
ಮಾವಗಂ ಜೀವರ್ಕಳೆಲ್ಲರ ।
ನಾವರಿಸಿದಾ ಮಾಯೆಯಂ ಕಳೆವಾ ಪ್ರಕಾಶವದು ॥ ೭ ॥

ಆಪ್ರಕಾಶವೆಯರಿವುಮಿಂತೀ ।
ವ್ಯಾಪಕರಿವೇನಾವು ನಾವೆನೆ ।
ದೀಪದೋಲ್ ಬೆಳಗುತ್ತಲಿರುವ ದೇವಿಯೆಂತೆಂದು ॥
ವೈಪರೀತ್ಯವನಳಿದಭೇದದ ।
ರೂಪದಿಂದಿರುತಿರ್ಪಿರವನುಂ ।
ಪಾಪರಹಿತಾತ್ಮರಿಗೆ ತಿಳುಪಿ ವದಾನ್ಯಮುಂದರಿದು ॥ ೮ ॥

ಅರಿವನುಂ ದೇವಿಂಗೆ ಮಾಯಾ ।
ಮರವೆಯಂ ಪೆಣದಿನಿಗೆ ಹೋಲಿಸಿ ।
ಯರಿಗಳಾರನು ಮಾಯೆವಂಶಿಕರೆಂದು ಹೀಗಳೆದು ॥
ವೀರೆವ ದೇವಿಯು ರಕ್ಕಸಾವಳಿ ।
ಮುರಿದುದಂ ಮಿಗೆ ನೀಳ್ದ ಬಾಹ್ಯಾಂ ।
ತರದ ಕೃತಿಯಂ ತಿಳುಪಿದಂ ಭಕ್ತಾದಿ ನಿವಹಕ್ಕೆ ॥ ೯ ॥

ಬೇನೆ ಬಪ್ಪುದು ರಸದ ಮೂಲದಿ ।
ಹಾನಿ ಬಪ್ಪುದು ಲೋಭ ಮೂಲದಿ ।
ಕಾಣುತಿಪ್ಪತಿಶಯದ ಶೋಕವುಮಿಷ್ಟ ಮೂಲದಲಿ ॥
ಆನುಗುಣ್ಯಾದಿ ಲಭಿಸಿವುಗಳಂ ।
ಜ್ಞಾನದಿಂ ಪರಿತ್ಯಜಿಸಿ ಸುಖಮಂ ।
ಕಾಣಬೇಹುದು ಮಲಸಿದೊಡೆ ಮಾವಿಲಗ ಬಿಡದೆಂದ ॥ ೧೦ ॥

ತತ್ತ್ವಮಸಿ ವಾಕ್ಯವದು ನರರಿಗೆ ।
ನಿತ್ಯ ನೀನೇ ಬ್ರಹ್ಮವೆಂದೊಡು ।
ಸತ್ತೆಯನ್ನು ಸಡಲ್ಚಿ ಬಂಬಳಗೊಳಿಪ ಜಗನರ್ಚಿ ॥
ಉತ್ಕಟಿಸಿ ಪಾಪೋತ್ಕರದ ಕೃತಿ ।
ಪೊತ್ತು ಪಶುವಿನವೋಲುಮಲೆಯುವ ।
ಸತ್ವಹೀನರು ಮೃತ್ಯುವಶಗರು ಸಂತಮಿರ್ದಪರೇ ॥ ೧೧ ॥

ಇಂತು ಬಗೆಬಗೆ ಯುಕ್ತಿಯಂ ಮಿಗೆ ||
ಸಂತನೊರೆಯೆ ವಿಚಾರದಿಂದಲಿ |
ಕುಂತು ಕೇಳಿದ ಭಕುತರೆಲ್ಲರು ಸಂಯತಾತ್ಮನನು ||
ಅಂತಕಾಂತನುಮಿವನುಮೆಂಬುತ |
ಸಂತುಷದೆ ಬಣ್ಣಿಸುತಮೀಪರಿ |
ಯಂತರಂಗವ ತಿಳುಪುಸವನಂ ಕಾಣೆವಿನ್ನೆಂದು ||೧

ಹೀಗೆನುತೆ ಪೌರಾಣ ಮುಗಿಸುತ |
ಯೋಗಿಯಂ ಶೃಂಗರಿಸಿ ಗ್ರಾಮದಿ |
ರಾಗದಿಂ ನೂರಾರುಮೆತ್ತಿನ ಪೂಡಿ ಮೆರೆಯಿಸುತ ||
ಆಗಳುಂ ಮಹಾಪ್ರಸಾದವ |
ನಾಗಶರ ಸಂಕುಳಕೆ ಸಲಿಸುತ |
ಜಾಗರೂಕದಿಯುತ್ಸವವನುಂ ಮುಗಿಸಿಯಾಬಳಿಕ ||೧೩

ಎಲ್ಲ ಹಿರಿಯರು ಕೂಡಿ ಯತಿಯಂ |
ಚೆಲ್ವ ರುದ್ರರ ಬಳಿಗೆ ಕರೆತಂ |
ದೊಳ್ಳೆ ಬೋಧಕರಿವರೆನುತ ಕೈವಾರಮಂ ಮಾಡೆ ||
ಬಲ್ಲ ಗುರುಚಿತ್ತೈಸಿ ತಚ್ಛಣ |
ಲಲ್ಲೆಯಿಂ ಯತಿಕುಲಲಲಾಮಗೆ |
ಸಲ್ವ ಗುಡಿಸಾಗರದ ಸಾಧುವುಮೆಂಬು ಪೆಸರಿಟ್ಟು ||೧೪

ಅತುಳ ಸಂತುಷದಿಂದೆ ಪಾವನ |
ಕಥಿಕನಾಚಾರಿತ್ರ್ಯ ಕಥಿಸುತೆ |
ಸತತಮೀತನ ಸೇವೆಗೈದಡೆ ತಡವು ಕೆಡವುಗಳು ||
ಹತವೆ ತಾವಾಗುತ್ತೆ ದೇವರ |
ಜೊತೆಗೆ ಕಾಲವ ನೂಂಕಿಯಂತ್ಯಕ |
ಮಿತ ಸುಖಾಂಬುಧಿಯೊಳಗೆ ಲೋಲಾಡುವರುಮೆಂತೆಂದ ||೧೫

ಬಳಿಕ ಕೆಲದಿನಗಳಿಯೆಯೊಮ್ಮೆಯು ।
ಚಲುವ ಗುಡಿಸಾಗರದ ಭಕ್ತರು ।
ಮೊಲೆದ್ದು ಮಠಮಂ ಕಟ್ಟಿ ಯತಿಯಂ ತಂದು ನಿಲ್ಲಿಸುವ ॥
ಆಳಿಪುನುಂ ಮಿಗೆ ಮಾಡಿ ರುದ್ರರ ।
ಚಲು ನಿದೇಶವ ಪೊಂದಿ ನಂತರ ।
ಬಳಿಯ ಕೆರೆ ಮುಂಭಾಗದೊಳು ಮಾಡಿದರುಮಾಶ್ರಮವ ॥೧೬॥

ಇಲ್ಲಿಯಜ್ಞನ ಮೂರ್ಖ ಶಾಸ್ತ್ರವು ।
ಫುಲ್ಲಶರನರಿ ಪೂಜೆಯುಂ ಬಹು ।
ಮಳ್ಳು ಮಾಳ್ಪವ ಮಾಯೆ ಬಳ್ಕುಡಿ ಬಗ್ಗು ಬಡೆವ ತಪ ॥
ಜೊಳ್ಳು ಭವಮಂ ಬೀಳು ಕೆಡಪುವ ।
ಚೆಲ್ವ ತತ್ತ್ವದ ಚಿಂತೆ ನಡದಿರ ।
ಲೆಲ್ಲ ಕಡೆಯಿಂ ಪಾಲಿಸಲುಮೈತಂದುದುಂ ಜನವು ॥ ೧೭ ॥

ಒಂದು ಸಮಯದಿಯೊತ ಬಹ್ವಾ ।
ನಂದದಿಂ ಹಳಿದುಪ್ಪಮಂ ಕಾ ।
ಯ್ದಂದದಿಂ ಕಟ್ಟಿರ್ದನುಂ ತಾನಿಪ್ಪ ಕೋಣೆಯೊಳು ॥
ಮುಂದೆ ಪಟ್ಟಿದ ಭೀಮಪೆಂಬವ ।
ಬಂದು ಬಾಗಿ ವಿರಾಗಿಯಂ ಮಿಗೆ ।
ಗಂಧನದೆ ನುತಿಗೈಯ್ಯಲಾತಗೆ ಬಹು ಶೃತನುಮಾಗ ॥ ೧೮ ॥

ಎಲವೊ ಭೀಮಪ ಮೇಲೆ ಕಟ್ಟಿದ ।
ಚಲುವ ಗಡಿಗೆಯ ತುಂಬ ಹಳಿದು ।
ಪ್ಪೊಲೆದುಮಿಟ್ಟಪೆನಿದು ಮಹೌಷಧ ಮಾತ್ರವಲ್ಲದಲೆ ॥
ತಿಳಿಯೆ ದೇವ್ತರ ಕಾಮಧೇನುವು ।
ಪೊಳೆವ ಚಿಂತಾಮಣಿಯಭೀಪ್ಸಿತ ।
ಸಲಿಸುವಾ ವರ ಕಲ್ಪವೃಕ್ಷವುಮಿದುವೆ ನೋಡೆಂದು ॥ ೧೯ ॥

ಇದರ ಬಲದಿಂ ಬೆನ್ನ ಬೇತಳ ।
ಕದುಬುವಾ ಬಲು ಸರ್ಪ ಹುಣ್ಣದು ।
ಕುದಿವ ಡೌಗಿಯ ಹುಣ್ಣು ಕುತ್ಸಿತನಾರುಮಿಸುಬುಗಳು ॥
ಕೆದಕುವಾನಿ ಹುರುಂಕುಮಿಂತೀ ।
ಹದಗೆಡಿಪ ಪಲವಾರು ಹುಣ್ಣಿನ ।
ಹೆದರಿಕೆಯೆ ತಾನಿಲ್ಲವಿಂತಿದು ಸರ್ವಜನ ಸೇವ್ಯ ॥ ೨

ಹೀಗೆಯಾತಗೆ ತಿಳುಪಿಯೊಂದಿನ ।
ತ್ಯಾಗಿ ಪೋದನು ನೆರೆಯ ಗ್ರಾಮಕೆ ।
ಸಾಗಸಿದ ಭೀಮಪ್ಪ ಕೆಲದಿನ ಮಠದ ವ್ಯವಹಾರ ॥
ಆಗಳಾತನ ಮನಸಿನಲಿ ಶಿವ ।
ಯೋಗಿಯಾ ಹಳೆದುಪ್ಪಮಂ ನಾಂ ।
ಪೂಗಿ ಫಲದನಿತು ಪಡೆದೊಡೆ ಗುರುತಾಗದೆಂತೆಂದು ॥ ೨

ಗಟ್ಟಿ ಕಟ್ಟಿದ ಗಡಿಗೆಯಂ ಸಲೆ ।
ತಿಟ್ಟನೇ ಬಿಚ್ಚುತ್ತಮದರೊಳು ।
ಬಟ್ಟನುಂ ತಾನಿಟ್ಟು ಸ್ವಲ್ಪಂ ಕೊಂಡು ಮೊದಲಿನೊಳು ॥
ಕಟ್ಟಿದೊಂದೆರಡುಂ ದಿನಂಗಳ ।
ಬಿಟ್ಟು ಸದ್ಗುರು ಬಂದು ತನ್ನಯ ।
ಶಿಷ್ಯ ಕೋಣೆಯೊಳೊರಗಿ ಮೇಲ್‍ಮುಖ ಮಾಡಿ ನೋಡುತಿರೆ ॥ ೩

ಚೆಲ್ವ ಗಡಿಗೆಯು ತನ್ನ ತಾನೇ ।
ನಿಲ್ಲದಲೆ ತೊನೆದಾಡೆ ಸಂದೆಗ ।
ವುಳ್ಳವನು ತಾನಾಗಿ ಋಷಿವರನೆದ್ದು ಕಟ್ಟಿರ್ದ ।
ಸಲ್ವ ಗಡಿಗೆಯ ಬಿಚ್ಚಿ ನೋಡಿದೊ ।
ಡೆಲ್ಲ ಗ್ರಂಥಿಯು ಬದಲಿ ತುಪ್ಪದಿ
ಬಳ್ಳಿನಿಂದೆಬ್ಬಿರ್ದ ಪೇರ್ಕುಳಿ ಕಂಡು ಕೋಪದೊಳು ॥ ೩

ಕರಿಸಿ ಭೀಮನ ಕೇಳಿಯಾತನು ।
ಗುರುವೆ ಪರಿಚಯವಿಲ್ಲವೆನಗಿದು ।
ದುರಿತ ಕೃತಿಯಂ ಮಾಡುವವನಲ್ಲೆಂದುಮುತ್ತರಿಸಿ ॥
ಅರಿಯದವನಂತಿರೆ ವಿರಾಗಿಯು ।
ಬರಿದೆ ನೀಂ ಬಾಯ್ಬಡಿವಿಯಾದೊಡೆ ।
ವರ ತಣಲುನುಂ ತುಳಿದ ಪರಿಯಿದು ತಿಳಿದುಕೋಯೆಂದ ॥ ೨೪ ॥

ಮಾಡಿದಾಕೃತಿ ಮುಚ್ಚಬಾರದು ।
ನಾಡೆ ಸಿರಿಯಂ ಮೆಚ್ಚಬಾರದು ।
ಚಾಡೆಯಂ ಮಿಗೆ ಪರರ ಕರ್ಣದಿ ಚುಚ್ಚಬಾರ್ದೆಂದು ॥
ಮೂಢರಲಿ ನಯ ಬಿಚ್ಚ ಬಾರದು ।
ಬೀಡನಲಿಯುರಿಹಚ್ಚಬಾರದು ।
ನೂಡುಕರ ಕರದುದಕಮಂ ಸಹ ಕಚ್ಚ ಬಾರದಲಾ ॥ ೨೫ ॥

ಕಳಹು ಪುರುಷಗೆ ಹೊಲ್ಲ ನಾರಿಯ ।
ಕುಳಕೆ ಸಿತಗತೆ ಹೊಲ್ಲ ವಿಂದ್ರಿಯ
ಸೆಳವು ಮನುಮುನಿಗಳ್ಗೆ ಹೊಲ್ಲವು ವಿದುಷ ವೃಂದಕ್ಕೆ ॥
ಅಲವರಲು ತಾಂ ಹೊಲ್ಲ ತತ್ತ್ವದ ।
ಬಲು ಸಿವೇದಕರಿಂಗೆ ದುಡ್ಡಿನ ।
ಗಳಿಕೆಯದು ಕಡು ಹೊಲ್ಲ ಬಲ್ಲದಗೆಲ್ಲ ಮಿಗೆ ಹೊಲ್ಲ ॥ ೨೬ ॥

ಇರಲಿದಿಲ್ಲಿಗೆ ಮುಂದೆಯವನಿಗೆ ।
ಗುರು ವಿಭಾಕರನೆಲವೊ ಭೀಮನೆ ।
ಖರೆತನವಿದರೊಳಗಿಹುದಾದೊಡೆ ತಾಪ ನಿನಗಿಲ್ಲ ।
ಮರತು ಸಟೆಯಂ ನುಡಿದೆಯಾದೊಡೆ ।
ಚರಣವೆರಡುಂ ಕೊಳೆತುವುದರೊಳು ।
ಪಿರಿದು ಕ್ರಿಮಿಗಳು ಬಿದ್ದು ಸಾಯುವೆ ತಿಳಿದುಕೋಯೆಂದ ॥ ೨೭ ॥

ಒರೆದುಮಿಂತಿರೆ ಕೆಲವು ಸಮಯವು ।
ಸರಿಯೆ ಭೀಮುಗವೆರಡು ಚರಣದಿ ।
ಗುರುಳಿಯೊಂದೊಂದೊಗೆದು ದುರ್ಭಾಸಾಂತು ಸೋವಿಟ್ಟು॥
ನೆರಳಿಯುರುಳಾಡುತ್ತಮಯ್ಯೋ ।
ದುರಿತಮಂ ನೆರೆ ಗೈದ ಫಲವೆಂ ।
ದರಿದುವೊಂದಿನ ವೃತ್ಯುವಂ ಪೊಂದಿದನುಮಾ ಡೊಣೆಯ ॥ ೨೮

ಹಿರಿಕಿರಿಯರೀವಾಳ್ತೆಯಂ ಬ ।
ಲ್ವರಿದುಮಜ್ಜನ ಪೊಗಳುತೀ ಯತಿ ।
ವರನ ಪಾದದ ಸೇವೆ ಗೈದಡೆ ಸುಖವೆ ಸುಖವೆಮಗೆ ।
ಹರಿದು ತಾನೇ ಬಪ್ಪುದೆಂಬುತ ।
ಮುರೆ'ಪ್ರಸಾಧಿತ ಮನವ ಬೆಳೆಸುತ ।
ಮರಿಯುತಿದ್ದರು ಪಾವನದ ಪರಮಾರ್ಥವಂ ಬಿಡದೆ ॥ ೨೯

ಎರಡು ಪೆಂಡರ ಕಾಟ ಮತ್ತೆಯು ।
ಮಿರುಳು ತಗಣೆಯ ಕಾಟವೆಂಬಾ ।
ಸರಸ ಗಾದಿಯ ವಚನವಿರುತಿರಲಾಡೊಡುಂ ನಾಸು ॥
ಹರನೆ ನಿನಗೆಲ್ಲಿಯದು ಕಾಟಂ ।
ದರಿದು ತವ ಪದ ಭಕ್ತಿ ಪವಣಿಸಿ ।
ನಿರುತ ಬೇಡುವೆ ಭವದ ಬೇಗೆಯ ಶಾಂತ ಪಡಿಸೆಂದು ॥ ೩೦

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೬ನೇ ಅಧ್ಯಾಯವು ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೧೮೧

# ೭ ನೇ ಅಧ್ಯಾಯ

**ಸೂಚನೆ :**

ರೋಣದೂರಿಗೆ ಬಂದುವಜ್ಞನು ।
ಜ್ಞಾನ ಬೋಧೆಯ ಮಾಡಿ ಕೇಡಿನ ।
ಭಾನಮಂ ಗೌಡರಿಗೆ ತಿಳುಪಿದ ವಿಷಯಮಂ ಬರೆವೆ ॥ಪಲ್ಲ॥

ಅಂದ ಪಥಮಂ ತುಳಿಯೆ ಋಷಿಗಳು ।
ನೊಂದುಕೊಂಡಾಶಾಪವಿತ್ತರು ।
ಮಂದು ಪಾವನ ಶಿವನ ತನುವಂ ಗೈಯ್ದ ಮೊದಲಂತೆ ॥
ಇಂದುಮಾಪರಿಯೆನ್ನ ವಿಷಯದ ।
ಸಂದ ವಾಸನೆಯಿಂದೆಯುಳಿಸುತೆ ।
ಚಂದದಿರವಂ ತೋರಿ ಮೊದಲಂತಿರಿಸು ಪಾರ್ವತಿಯೆ ॥ ೧ ॥

ನಮ್ಮ ಮನೆಯೊಳು ಲಿಂಗಪೂಜೆಯ ।
ನೊಮ್ಮೆಯುಂ ಮಾಡಿಲ್ಲ ನಮಗೇಂ।
ಕಮ್ಮಿಯಾಗಿಲ್ಲವದು ಪೂಜೆಯ ಸ್ವಾಮಿ ನಾವಲ್ಲ॥
ಸುಮ್ಮನೇ ದುಡಿಯೆಂದುಮುವನಾ ।
ರಮ್ಯ ಪೂಜೆಯ ವಸ್ತುಗಳನುಂ ।
ಚಿಮ್ಮಿಯೊಗೆಯುವ ದಡ್ಡರಿಂಗೆಯು ಸುಖವ ಕುಡು ಶಿವನೆ ॥ ೨ ॥

ಮುಂದೆ ಕೆಲದಿನವಾದ ಬಳಿಕಂ ।
ಬಂದು ಗುಡಿಸಾಗರದಿ ನೆಲಸಿದ ।
ಬಂಧುರದ ಮಾಸಾಧುವರನಂ ರೋಣದೂರಿಂಗೆ ॥
ಚಂದ ಗದುಗಿನ ಪಾವನ ಶಿವಾ ।
ತಂದ ಯತಿಗಳು ಬೇಗದಿಂ ಕರ ।
ತಂದುಮಿಟ್ಟರುಮ್ಮೈಹೊಳಿಯವರ ಸೆಡ್ಡಿನಾ ಬಳಿಗೆ ॥ ೩ ॥

ಅಲ್ಲಿ ನಿತ್ಯಂ ಶಾಸ್ತ್ರ ವಿಷಯವು ।
ಸಲ್ಲಲಿತನಿಂ ನಡೆಯೆ ಕೇಳ್ವುದ ।
ಕೆಲ್ಲರುಂ ಪ್ರೀತಿಯಲಿ ಬಂದರು ಭಕ್ತಿಯುಮೊಡರ್ಪೆ ॥
ಸುಳ್ಳಿನಾ ಬಲುಮೊಟ್ಟೆ ಸಂಸೃತಿ ।
ಕಳ್ಳ ಕಾಲನಬಿಟ್ಟಯಿದರೊಳು ।
ಮೆಳ್ಳನಿತು ಸುಖವಿಲ್ಲವೆಂದ್ಯೆತಂದ ಜನರಿಂಗೆ ॥ ೪ ॥

ತಂದೆ ತಾಯ್ಗಳು ಬಂಧು ಬಳಗವು ।
ಹಿಂದೆ ಬರುವವರಲ್ಲ ಸುಮ್ಮನೆ ।
ಮಂದಿ ನೋಡಲಿಯೆಂದು ಪೆಣಮಂ ಮೆರಸಿ ಲಬ್ಬಿಡುತೆ ॥
ಅಂದು ಕಣ್ಣೀರ್ಸುರಿಸಿಯುಳವೃತ ।
ಚಂದದಿಂ ಮಣ್ಗೊಡುತ ಮುಗಿಯಿಸಿ ।
ಬಂದುಮುಣ್ಣುವ ಬನ್ನಿರೆಂಬುವರಹಿತರಿವರೆಂದ ॥ ೫ ॥

ಪೆಣಕಮಾರಾರಳುವದಿಲ್ಲವು ।
ಗುಣಕವುಳುವರು ತಿಳಿದು ನೋಡ್ದೊಡೆ ।
ಮನವನಿವರೊಳುಮಿಡದೆ ಸದ್ಗುರುನಾಥನಂ ಬಿಡದೆ ॥
ದಿನವು ಶ್ರವಣಾದಿಗಳ ಮಾಡುತೆ ।
ತನುವಿದುಂ ಹಳೆ ರಗಟೆಯಂತೆಯು ।
ಬಿನುಗು ಮಲದಿಂ ಕೊಳಕು ನಾರುವದೆನುತ ತಿಳಿರೆಂದೂ ॥ ೬ ॥

ರೋಗಿ ಯೋಗಿಯ ಜನ್ಮವೆಂತೆನೆ ।
ಸಾಗಿ ಋತುಮತಿಯಾದ ತ್ರಿ ದಿನದಿ ।
ರಾಗದಿಂ ಮಿಗೆ ಗರ್ಭನಿಂತೊಡೆ ಕಳ್ಳ ಪುಟ್ಟುವನು ॥
ಬೇಗವೈದುದಿನದಲಿ ಪುಟ್ಟಿದ ।
ರಾಗ ಪಂಡಿತನೇಳು ದಿನದೊಳು ।
ಬೇಗಿ ಜನಿಸಲು ದ್ವಾರಪಾಲಕನಾಗಿ ಬದುಕುವನು ॥ ೭ ॥

ಎಂಟುದಿನದಲಿ ಪುಟ್ಟಿದಾತನು ।
ಬಂಟನೆನಿಸದೆ ಬಡವನಾಗುವ್ನ ।
ಗಂಟನುಳ್ಳವ ನವದಿನದೊಳು ಚತುರ್ದಶದಿ ರೋಗಿ ॥
ಹೊಂಟವನು ಪದಿನೈದು ದಿನಕಂ ।
ಪಂಟದಾಮಾರಾಜ ಭೋಗಿಯು ।
ಮಂಟದವ ಪದಿನಾರು ದಿನಕಂ ಯೋಗಿಯವನೆಂದ ॥ ೮ ॥

ಬೇಡ ಬಾರದು ನೀಚರಂ ಬಲು ।
ನೋಡ ಬಾರದು ಸ್ತ್ರೀಯ ಮುಖವಂ ।
ಹೇಡಿ ಬೆನ್ನಂ ಕಟ್ಟ ಬಾರದು ಕರೆಯದವರಲ್ಲಿ ॥
ಕೂಡ್ರಬಾರದು ಹೋಗಿ ತಾನೇ ।
ಯಾಡಬಾರದು ಪಗಡಿ ಜೂಜಂ ।
ನಾಡೆ ಖಾಲೀ ತಿರುಗ ಬಾರದು ಕೂಲಿದೊರೆವಾಗ ॥ ೯ ॥

ಹರನು ಬೇರೆಯು ನರನು ಬೇರೆಯು ।
ಮಿರುವರೆಂಬುವ ಬಿನುಗು ನುಡಿಯಂ ।
ಸರಿಸಿ ಸದ್ಗುರು ಹರನೆ ನರನೆಂಬುದನು ತಿಳುಪುತ್ತ ॥
ಪರಶುರಾಮನು ರಾಮನಿಗೆ ನಿಜ ।
ವರುಪಿ ವಿಷ್ಣುತ್ವವನು ದೊರಕಿಸಿ ।
ಕರದೊಳಿಟ್ಟಾವೋಲು ಕುಡುವುತೆ ಪಾಲಿಪನುಮೆಂದ ॥ ೧೦ ॥

ಮನಸಿನಾವ್ಯಾಪಾರ ಕನಸುಂ ।
ನೆನಸು ಬಾಹ್ಯೇಂದ್ರಿಯದ ವ್ಯಾಪಾ ।
ರನಿಸಿಯಜ್ಞಾನೆಂಬ ಮರಣವನಾಂತು ತೋರುವವು ॥
ಪ್ರಣುತ ಸದ್ಗುರು ಬಂದು ಮನಸಿನ ।
ಮೊನೆ ನಿರಾಲಂಬದಲಿ ನಿಲಿಸೆಂ ।
ದನಿವದಿಂದಲಿ ತಿಳುಪಲದುವುಮನಸ್ಕದಿರವೆಂದ ॥ ೧೧ ॥

ಹೃದಯ ಕಮಲದ ಮಧ್ಯದಲ್ಲಿಯು ।
ಮದನ ವೈರಿಯ ಕಂಡು ಪ್ರತಿದಿನ ।
ವುದಯಿಸುವ ಮೂರವಸತೆಗಳನು ಬಿಡದೆ ಗೆಲ್ಲುತ್ತೆ ॥
ಅಥಟದಿಂದಿರೆಯುವನೆ ಜಗದೊಳು ।
ಮುದದಿ ಬಾಳುವ ವೀರ ಪುರುಷಂ ।
ತುದಿಯೊಳವನೇ ಮಾಜಗದ್ಗುರುವೆಂದು ತಿಳಿಯೆಂದ ॥ ೧೨ ॥

ಗುರುವಿನಾ ಮಗನಾಗಿ ನರರನು ।
ಪಿರಿದು ಕಾಡುತ ತಿಂಬ ಬಯಿಪರು ।
ಸುರರವಾಕಳವಿದ್ದು ನೆರಮನಿ ಮಜ್ಜಿಗೈದುವರು ॥
ಪಿರಿಯ ಸಿದ್ಧಿಯ ಮಾಳ್ಪೆನೆಂದಾ ।
ತುರದಿ ಪೊಲಮಂ ಕೂಲಿ ಕಾಯ್ವರು ।
ಸರಸ ಬಾಲ ಬ್ರಹ್ಮಚಾರೆಂಬುತ್ತೆ ಲಲನೆಯರ ॥ ೧೩ ॥

ವದನವನು ನೋಡುತ್ತಲಿರ್ಪರು ।
ಹೃದಯದೊಳು ನಾಂ ನಿತ್ಯ ತೃಪ್ತೆಂ ।
ದೊದರಿಕೊಳ್ಳುತೆ ಮೆತ್ತನನ್ನವ ಬೇಡಿ ತಿಂಬುವರು ॥
ಪದೆದು ನಿಮ್ಮಳ ಸಿದ್ಧ ರಸಮಂ ।
ಮುದದಿ ಪಡದಿಹೆನೆಂದು ಪೇಳ್ವರು ।
ಬದನಿ ಮೂಲಂಗಿಗಳ ಪಚಡಿಯ ಕದ್ದು ಭುಂಜಿಪರು ॥ ೧೪ ॥

ಇಂಥ ಜನಮಂ ಸರಿಸಿ ಶರಣರ ।
ತಿಂತಿಣಿಯನೊಡಗೂಡಿಯಾತ್ಮದ ।
ಚಿಂತನೆಯ ಮಾಡಿದೊಡೆ ಕಲ್ಪಿತ ಪುರುಷ ಸಾಯುತ್ತೆ ॥
ಅಂತಕಾಂತನ ಸುಖವು ತನ್ನಿಂ ।
ದಿಂತು ತಾನೇ ಬಂದು ಮಾಯಾ ।
ಭ್ರಾಂತಿಯಂ ಕೆಡೆಮೆಟ್ಟಿ ಬಳಿನಿಲ್ಲುವದುಮೆಂತೆಂದ ॥ ೧೫ ॥

ಮುಂದೆ ಫಣಿಯಪ ಗೌಡರೊಂದಿನ ।
ಬಂದು ನಮ್ಮೊ ಮಗನ ಲಗ್ನವ ।
ಚಂದದಿಂ ಹಮ್ಮಿರುವೆ ಮಾ ಮಾ ಸ್ವಾಮಿ ಕೇಳಿರುವೆ ॥
ಕುಂದು ಕೊರತೆಗಳೇನುಮಿಲ್ಲ ಪೊ ।
ಸಂದಿಹುದು ಮಾಡೆಂದು ಪೇಳಿದ ।
ರಿಂದೆ ಬಂದೆನುಮಿದಕೆ ತಮ್ಮಭಿಪ್ರಾಯವೇನೆನ್ನೆ ॥ ೧೬ ॥

ಬಳಿಕ ಮೇಲ್ಮುಖ ಮಾಡಿ ತನ್ನೊಳು ।
ಸಲೆ ಭವಿಷ್ಯವನರಿತು ಗೌಡರೆ ।
ಪಲವು ಯೋಚನೆ ಬಿಡಿರಿ ಈ ಸಂಬಂಧ ತೊಲಗಿಸಿರಿ ॥
ಉಳಿವದಿಲ್ಲವು ಬಾಲನಿದರೊಳು ।
ಮೊಲೆದು ಲಗ್ನವ ಮಾಡಿಕೊಂಡಾ ।
ಬಳಿಕ ವಾರೊಪ್ಪತ್ತಿನಲ್ಲಿಯೆ ಸಾಯ್ವನೆಂತೆಂದ ॥ ೧೭ ॥

ಮರುಗಿ ಮನದೊಳು ಮನೆಗೆ ಬಂದೀ ।
ಹರಳು ಕಡಿದಂತಾದ ವಾರ್ತೆಯ ।
ನರುಹೆ ಕೂಡಿದ ಜನವು ಸಾಧುವಿಗೇನು ಗೊತ್ತೆಂದು ॥
ತಿರಿದು ತಿಂಬುವ ಜನರ ನುಡಿಯಂ ।
ಸರಸದಿಂ ನಂಬುವದು ತರವೇ ।
ಪಿರಿಯ ಸ್ವಾಮಿಗಳರಿಯರೇ ಕಾಶಿಯಲಿ ಕಲಿತವರು ॥ ೧೮ ॥

ಪಾದ ತೀರ್ಥವ ಕುಡಿಸಿಯವರ ಪ್ರ ।
ಸಾದಮಂ ಬಲು ತಿನಿಸಿಯಮೃತ ।
ಮಾದ ಕರಮಂ ಶಿರದೊಳಿಡಿಸಿ ವಿಶುದ್ಧನಂ ಮಾಡಿ ॥
ಸಾದರದೊಳೆಲ್ಲಾ ಜನಂಗಳು ।
ಸಾಧಿಸಿ ಸುಮುಹೂರ್ತವೊಳಗಂ ।
ಖೇದಮಂ ಬಿಸುಟುತ್ತಮಕ್ಷತೆ ಪಾಕ ಬೇಕೆಂದು ॥ ೧೯ ॥

ಮತ್ತೆ ಮನಬಲ್ಲಂತೆ ನುಡಿದುಂ ।
ಸತ್ತಮನ ನುಡಿ ನಿಗುಳ್ಚಿ ಲಗ್ನವ ।
ನೊತ್ತರದಿ ಮಾಡಿದರು ಸಡಗರವೆರಸಿ ಮುಂದದಿಂದೆ ॥
ತತ್ತು ಕನ ಚಿಂತೆಯಲಿ ಗೌಡರಿ ।
ಗುತ್ತಮವು ತಾನೆನಿಸದನುದಿನ ।
ಚಿತ್ತದಲಿ ಬಾನ್ನವಿರನಂ ಸ್ಮರಿಸುವರು ಪಗಲಿರುಳು ॥ ೩೦ ॥

ಕಡೆಗೆ ತಡಮಾಡದಲೆಯೊಂದಿನ ।
ಹುಡುಗ ಸತ್ತಿತು ಜಡ್ಡಿನಿಂದಲಿ ।
ನೃಡ ಸರೂಪದ ಯತಿಯುಸುರಿದುದು ಸಿದ್ಧ ತಾನಾಯ್ತು ॥
ಒಡನೆ ಗೌಡರು ನಂಬಿ ಯತಿಯುಂ ।
ನುಡಿದುದುಂ ನಿಜವಾಗ್ವುದಿವರಂ ।
ಬಿಡದೆ ಧರ್ಮಾತ್ಮರ ಸುಭಾವಿಯ ಬಳಿಗೆ ಪೊಲಹಿಡಿದು ॥ ೩೧ ॥

ಮಠವ ಕಟ್ಟಸಿಯಿಟ್ಟರಲ್ಲಿಂ ।
ಪಟುತರದ ಸುಜ್ಞಾನಿಯಜ್ಜಗೆ ।
ಧಿಟ ನುಡಿಯ ಸನ್ಯಾಸಿಯೆಂಬುವ ಬಿರುದು ತಾವಿತ್ತು ॥
ಅಟನ ಮಾಡ್ದೊಡು ಪಳ್ಳಿ ಪಳ್ಳಿಗೆ ।
ಝುಟತಿ ಬರಬೇಕೆಂದು ಋಷಿಗಳ ।
ಸ್ಫಟಿಕದಂತಿಹ ಪಾದ ಪದ್ಮಕೆ ಮಣಿದು ಬೇಡಿಕೊಳೆ ॥ ೩೨ ॥

ಪಟ್ಟಣಕೆ ಮಿಗೆ ಪಂಚ ರಾತ್ರಿಯು ।
ಶ್ರೇಷ್ಠಪಳ್ಳಿಗಮೇಕ ರಾತ್ರಿಯು ।
ಮುಟ್ಟಲೆವ ನಮ್ಮನ್ನು ಮಿಲ್ಲೆಯೆ ಕಟ್ಟ ಪಾಕದಲೆ ॥
ಬಿಟ್ಟು ಬಿಡಬೇಕೆನ್ನೆ ಗೌಡರು ।
ಮುಟ್ಟಹಾಸದಿ ನಿಮ್ಮ ಚರಣಕೆ ।
ಮುಟ್ಟತೀಸ್ಥಲವೆಂದು ಯತಿಯಂ ವರ್ಣಿಸಿನರಾಗ ॥ ೩೩ ॥

ನೀವುಮಾಸೆಯ ಬಿಟ್ಟ ಮಹಿಮರು।
ದೇವರೇ ನೀವಾಗಿ ಜಗಮಂ ।
ಸಾವಧಾನದಿ ಕಾಯ್ವ ಋಷಿಗಳಗವ್ಯ ಪಂಡಿತರು ॥
ನೀವರಿಯದಿಹುದಾವದಿರ್ಪುದು ।
ಭಾವ ಶುದ್ಧಿಯಲಿಂದೆ ಮುಂದಿನ ।
ಭಾವುಕಾಭಾವುಕವ ತಿಳಿಸುತ ಮೆರೆಯುವಿರಿ ಜಗದಿ ॥ ೨೪ ॥

ಆಸೆಯಾ ಮಾಹಾ ನದಿಯಲಿಂ ।
ದೀಸಿ ಪಾರಾಗದಲೆ ಮುಳುಗುತ ।
ಹೇಸಿ ಸಾಧುಗಳೆನಿಸಿ ಕೊಂಬರುಮೆನಿತೊ ಮಾನವರು ॥
ಓಸರಿಸಿ ನೀನದನು ಗುರುವಿನ ।
ದಾಸನಾಗುತೆ ಬಾಳಿ ಮನದಭಿ ।
ಲಾಷಮಂ ಸೆರೆ ಕಿತ್ತು ಪೂರ್ಣ ಪ್ರಜ್ಞನೆಂದೆನಿಪೆ ॥ ೨೫ ॥

ಅತ್ತಯಿತ ಹೋದಾಡು ಜನಕಂ ।
ಗೊತ್ತುಮಾಗದೆ ಸತ್ಯ ವಸ್ತುವು ।
ಸತ್ತುಪೋಗ್ವರು ಬಿದ್ದು ಭವದಾ ತಿರುಗುಣಿಯ ಮಡಕೆ ॥
ನಿತ್ಯನೇ ನೀದ್ರವಿಸಿಯಿವರನು ।
ಮೆತ್ತಿ ಮೇಲಕೆ ತೆಗೆದು ಗಾಳಿಗೆ ।
ಪೊತ್ತೊಗೆದು ಲೌಲ್ಯದೊಳು ಬೋಧಿಪೆಯಾತ್ಮವಿಷಯವನು ॥ ೨೬ ॥

ಭಕ್ತರಾಮನೆ ನಾಯಿಯವರಾ ।
ಹಿತ್ತಲದ ಗಿಡ ಮೆಟ್ಟುವಾ ಕೆರ ।
ತೊತ್ತಿನಾ ಮಾ ತೊತ್ತು ಭಾರವನೆಳೆವ ಬಿಳಿಯೆತ್ತು॥
ನಿತ್ಯ ಕೈಯೊಳು ಪಿಡಿವ ಬೆತ್ತವ ।
ನಿತ್ತು ಮಾಡೆಂದಳುಪಿನಿಂ ಜೇ ।
ಡುತ್ತಲಿರ್ಪರ ಸಂಗಮಂ ಮಾಡೆಂಬೆಯುಳ್ಳರದಿ ॥ ೨೭ ॥

ರೊಕ್ಕವಮಂ ಗಳಿಸುತ್ತೆ ನಾಳಿಗೆ ।
ಮಕ್ಕಳಿಗೆ ಬೇಕೆಂದು ನುಡಿಯುತ ।
ಟೊಕ್ಕನೊಡೆವಾ ಮುಕ್ಕು ಚಲು ಪರ್ಯಾಣ ತೆರವಿರುವ ॥
ದುಃಖ ದೇಹವ ನೆಚ್ಚಿ ಬಾಳ್ಕೆಯ ।
ಲೆಕ್ಕ ಪಾಕುತೆ ಬೇಗು ಬೆಳಗುಂ ।
ದಕ್ಕಿ ತಿಂಬುವ ಬೇವಸರಿಗರುಪಿಯುದ್ಧರಿಪೆ ॥ ೨೮ ॥

ಏಕೆ ಪಾಪವ ಮಾಡಿ ಸುಮ್ಮನೆ ।
ಶೇಕುತಿರ್ಪಿರಿಯಿಹಪರದೊಳೆಡ ।
ತಾಕುವದು ತಪ್ಪಿಸುವ ಮಿಗೆ ಜಾಮೀನದಾರಾರು ॥
ಜೋಕೆ ಮಾಳ್ಪಾಸತಿಯೊ ಪುತ್ರನೊ ।
ಸಾಕಿ ಸಲುಹಿದ ತಂದೆ ತಾಯಿಯೊ ।
ಸಾಕು ಮಾಡಿರಿಯಿಲ್ಲಿಗೆಲ್ಲವನೆಂದು ರೂಪಿಸುವೆ ॥೨೯॥

ದೇವ ಸರ್ಕಾರದೊಳುಮೆನಿತುಂ ।
ಸಾವಗಿಸುವಾ ಬಿಗುವುಮಿಲ್ಲದ ।
ಕಾ ವರೇಣ್ಯನು ಕಾಮನಂ ದಹಿಸಿದನು ಭೀತಿಸದೆ ॥
ಜೀವ ಸರ್ಕಾರದೊಳುಮಿಂಥಹ ।
ಲಾವಕರ ಗಲ್ಲಿಂಗೆ ಪಾಕುವ ।
ರಾ ವಿಚಾರವುಮೇಕೆನಗೆ ಶಿವ ನಮಿಪೆ ತವ ಪದಕೆ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ । ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು । ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮದ ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ ದಲ್ಲಿ ೭ನೇ ಅಧ್ಯಾಯವು ಮುಗಿದುದು ॥

— ಶುಭ : —

ಒಟ್ಟು ನುಡಿಗಳು ೧೮೧

# ೮ನೇ ಅಧ್ಯಾಯ

**ಸೂಚನೆ :**

ಶುದ್ಧ ಶ್ರೀಗುರು ದೇವ ಪ್ರ ।
ಸಿದ್ಧವಾದ ವಿದೇಹವ್ಯೆದೆ ನಿ ।
ಷಿದ್ಧಕರ್ಮಿಗಳಿಬ್ಬರಾ ಚರಿತೆಯನುಮಾಂಬರಿವೆ ॥ ಪಲ್ಲ ॥

ಗಗನ ನಿನ್ನಯ ನಾಭಿ ದಶ ದಿ ।
ಕ್ಕುಗಳು ಕಿವಿ ಪಾತಾಳ ಪಾದವು ।
ಮಗಿರ ಲೋಕವು ಶಿರವು ಮಿೂಬ್ರಹ್ಮಾಂಡವೇಯುದರ ॥
ಗಗನ ಮಣಿಗಳು ನೇತ್ರ ನರ ಖಗ ।
ಮೃಗವುಮುಪ್ಪಿನ ಕಾಯಿಯೂಟದ ।
ಮಿಗಿಲ ದೇವ್ತರು ರೋಮವಿಂತಿಹ ಶಿವನೆ ಕಾಪಿರಿಸು ॥ ೧ ॥

ಜನಕೆ ಬುದ್ಧಿಯುಮಿಲ್ಲ ಸುಮ್ಮನೆ ।
ದಣಿದು ಗಳಿಸಿದ ದುಡ್ಡು ಸಾಧುರ ।
ಹೆಣಕೆ ಬಡಿವರು ಮಠವು ಗುಡಿ ಗುಂಡಾರ ತಿರಗುವರು ॥
ಪ್ರಣುತ ಸಪ್ತಕ ಜಾತ್ರಿಯುತ್ಸವ ।
ವನು ತಪಾಸಣೆ ಮಾಡಿಯಲ್ಲಿಗ ।
ಮಣುಗಿ ಮನೆಯಂ ಪೋಗ್ವರೆಂಬಗು ಶಿವನು ಮುದವಿಡಲಿ ॥ ೨ ॥

ಕೆಲವು ದಿವಸಂಗಳೆಯೆ ರುದ್ರರು ।
ಸಲೆ ಶಿವಪ್ಪ ಗುಳೇದ ಗುಡ್ಡದ ।
ಚಲುವ ರಾಮಪ್ಪಾದಿ ಶಿಷ್ಯರಮಧ್ಯದಲ್ಲಿಂದೆ ॥
ತೊಳೆದ ಕನ್ನಡಿಯಂತಿರುವ ಈ ।
ನಲಿವ ಗುಡಿಸಾಗರದ ಯತಿಯಂ ।
ನಿಲದೆ ನೋಡುತೆ ಹಿಗ್ಗಿ ಹರಕೆಯನಿತ್ತರುಂ ಮುದದಿ ॥ ೩ ॥

ನೀನು ಕನ್ನಡ ನಾಡಿನೊಳಗಂ ।
ಜಾಣ ಧನ್ವಂತರಿಯು ನಿನಗಂ ।
ತಾನೆಯಿಪ್ಪತ್ತೊಂದು ಲಕ್ಷ ಗಿಡ ಲತೆ ಗುರ್ತಿರಲಿ ॥
ಬೇನೆಯಿಂ ಬಳಬಳಲಿ ಸಾಯುವ ।
ಮಾನವರು ನಿನ್ನೌಷಧವನು ವಿ ।
ಧಾನದಿಂ ಸೇವಿಸುತ ಗುಣವಮಂ ಪಡೆದು ಹರ್ಷಿಸಲಿ ॥ ॥ ೪ ॥

ನಿನ್ನ ನಾಲಿಗಿ ಮೇಲೆ ಸರಸ್ವತಿ ।
ಘಣ್ಣಗೆಯು ಕುಣಿದಾಡಿ ನಿನ್ನಿಂ ।
ಚನ್ನಮಾದ ಪುರಾಣವಮಂ ನಳ ಪಾಕ ಶಾಸ್ತ್ರವನು ॥
ಇನ್ನುಳಿದ ಪದ ಪದ್ಯಮೌಷಧ ।
ದುನ್ನತದ ಪುಸ್ತಕವ ಬರಿಸುತೆ ।
ಚೆನ್ನುಮಂ ಜಗಕಿಡಿಸುತಂ ವಾಕ್‌ಸಿದ್ಧಿಯೆಂ ಕುಡಲಿ ॥ ೫ ॥

ದಿನವು ತಪ್ಪದೆ ಪೋಳಿಗೆಯ ಭೋ ।
ಜನವು ದೊರೆಯಲಿ ಪ್ರಾಣವಿರುತನ ।
ಮಣಿದು ಸಂತತ ರಾಜ ವೈಭವ ತಾನೆ ಬರುತಿರಲಿ ॥
ಮಣಿಯುದಾರಿಗುಮಣಿಮೆ ಗರಿಮೆಗ ।
ಳಣೆದು ಕಾಲಜ್ಞಾನ ಶಕುನಗ ।
ಳನಿತರಂವುಮುದ್ಭವಿಸಿ ನೀರೇರಿಸಲಿಯಿೂ ಜಗಕೆ ॥ ೬ ॥

ಕಲಿತವನು ನೀನಲ್ಲದಿರ್ದೊಡು ।
ಸುಲಿದ ಬಾಳೆಯ ಹಣ್ಣಿನಂದದಿ ।
ಸುಲಭವಾಗಿ ಜ್ಞಾನದನುಭವ ಬೀರ್ಪ ರುಚಿ ಬರಲಿ ॥
ನಿಲದೆಯೊಂದೆಡೆ ತಿರುಗಿ ಭಕ್ತರ ।
ಕುಳಕೆ ಬೋಧಿಪ ನಿನಗೆ ದೇಶದ ।
ಚಲುವ ವರ ಪನ್ನೆರಡು ಜ್ಯೋತಿರ್ಲಿಂಗ ಕಾಣಿಸಲಿ ॥ ೭ ॥

ತೀರು ಪಾಲ್ಕಿಯನೇರದಲೆ ಪರಿ ।
ಪೂರಣ ಸುಖ ಜನೂಾಯಿಸುತ್ತಂ ।
ಸಾರ ಪದವಿ ಸುಪಟ್ಟದಿಚ್ಛೆಯು ಸರಿದು ತಂತಾನೆ ॥
ಹಾರಿ ಹೋಗಲಿ ಬಳಿಗೆ ಬರಗೊಡ ।
ದಾರನೇಂಕಾಂಗಿಯೆನಿಸುತ್ತೆ ವಿ ।
ಚಾರದಿಂ ಲಂಗೋಟಿಯಂ ಬಿಗಿಗೊಳಿಪ ಮನವಿರಲಿ ॥ ೮ ॥

ಕೇಳಿ ಶಿಷ್ಯರು ನಮ್ಮೊಳಗವಿೂ ।
ಲೀಲೆಯಾ ಮಾ ಸಾಧುವರ್ಯಂ ।
ಮೇಲು ಮೇಲೆಂದೆನುತ ಕೈಪರೆಗುಟ್ಟೆ ಮನದುಂಬಿ ॥
ಸಾಲ್ವಿನೆಗಮಾರಾಧ್ಯನಂ ನುತಿ ।
ಸಾಲಯಕೆ ತಾವ್ ಪೋದರಲ್ಲಿಂ ।
ಪಾಲಕರು ಗುರುದೇವ ರುದ್ರರು ರುಜೆಗೆ ತುತ್ತಾಗಿ ॥ ೯ ॥

ಕರಸಿದರು ನಂಬುಗೆಯ ಭಕ್ತರ ।
ನೊರೆದಶವರಿಗೆ ತೀರಿಕೊಳ್ವುದ ।
ನುರದೊಳಗೆ ಗಡಿಬಿಡಿಯುಮಾಯಿತು ಕೇಳಿದವರಿಂಗೆ ॥
ಗುರುವೆ ನೀವಿರಬೇಕು ಗುಡ್ಡದ ।
ಪರಿಯು ನಮ್ಮನು ಸಲುಹ ಬೇಕೆನೆ ।
ಯಿರುವಲೆಕ್ಕವು ಮುಗಿದು ಬಂದಿದೆ ಮರುಗದಿರಿರೆಂದ ॥ ೧೦ ॥

ನನ್ನ ನುಡಿಯಂ ಕೇಳ್ದು ನಡಿದೊಡ ।
ಮಿನ್ನು ಬಪ್ಪುದು ಕಾಶಿಯಾತ್ರೆಯ ।
ಪುಣ್ಯದನಿತುಂ ಫಲವುಮದರಿಂ ಭಯವು ನಿಮಗಿಲ್ಲ ॥
ಉನ್ನತದ ಸಂಸಾರ ಸುಖವಾ ।
ಮಣ್ಣು ಮಾಡಿರಿ ನಿಮಗೆ ನಿಮ್ಮೊಲು ।
ಮನ್ನಿಸರಂ ಮಾಡಿಡುವ ಶಕ್ತಿಯನಿತ್ತಿಹೆನುಮೆಂದು ॥ ೧೧ ॥

ವೀರ ಪದ್ಮಾಸನವ ಪಾಕು
ಸಾರ ಮನ ಭ್ರೂಮಧ್ಯೆದೊಳಗಂ ।
ಸೇರಿಸುತೆ ಮಾಕಾಶದಿ ಘಟಾಕಾಶ ಬೆರತಂತೆ ॥
ತೋರರವಿನೊಳಗರವನಡಗಿಸಿ ।
ಸೂರಿ ಬಿಟ್ಟನು ಪ್ರಾಣಮಂ ಮಿಗೆ ।
ತೀರಿತಿಲ್ಲಿಗೆ ಜಗದ ಪುಣ್ಯವುಮೆಂದು ಜನರತ್ತು ॥ ೧೨ ॥

ಕುಸುಮುದಾ ಮಳೆಗರಿಸಿ ನುತಿಯಂ ।
ರಸಿಕತನದಿಂ ಮಾಡಿ ಭಜನೆಯ ।
ರಸದ ಹೊಳೆಯಂ ಹರಿಸಿ ದೇವ್ತರ ದುಂದುಭಿಯ ಹೊಡಿಸಿ ॥
ಸಸುರದಾರುತಿ ಬೆಳಗಿ ಪಾವನ ।
ಕುಶಲನಂ ಬಳಿ ಬೆಣ್ಣಿ ಹಳ್ಳದ ।
ಯೆಸೆವ ದಂಡೆಯ ಮೇಲೆ ದಪನವ ಮಾಡಿದರು ಮರುಗಿ ॥ ೧೩ ॥

ಇತ್ತ ಗುಡಿಸಾಗರಕೆ ಬರೆ ವರ ।
ಭಕ್ತನಾದ ಪರಡ್ಡಿ ಮಲ್ಲಪ ।
ಸತ್ಯನಾದೀಯತಿಯ ಕರಸಂಜಾತನಾಗಿರಲು ॥
ಮತ್ತೆಯಿವನೊಲುಮೋರ್ವ ನಾರಿಯು ।
ನಿತ್ಯವಜ್ಜನ ಹಸ್ತಿಕಳೆನಿಸಿ ।
ಪೊತ್ತು ಪೊತ್ತಿಗೆ ಬಂದು ಶಾಸ್ತ್ರದ ಶ್ರವಣ ಮಾಡಲ್ಕೆ ॥ ೧೪ ॥

ಮುಂದೆ ಮಲ್ಲಪ್ಪನು ಸುಬಾಲೆಯು।
ಮೊಂದುಮಾದರು ಗ್ರಾಮದೊಳಗಿನ ।
ಮಂದಿ ಪೇಳ್ದೊಡು ಕೇಳಲೊಲ್ಲರು ಲಜ್ಜೆಯಂ ತೊರೆದು ॥
ಬಂಧು ಬಳಗವ ಬಿಟ್ಟು ಮನಸಿಗೆ ।
ಬಂದ ಪರಿಯೊಳು ನಡೆದು ತಮ್ಮಯ ।
ದಂಥೆಯಂ ಮೇಲ್ಮಾಡಿ ಮಾತಾಡುವರು ಭೀತಿಸದೆ ॥ ೧೫ ॥

ಕಡೆಗವೊಂದಿನ ಯತಿಯ ಮುಂದೆಯು |
ಬಿಡದುಸುರಿದಡು ಮಠವ ಭಕ್ತರು |
ಹಿಡತರಿಸಿ ತಚ್ಛಣಮೊಳಿಬ್ಬರ ಮಠವಿ ಕೂಡ್ರಿಸುತೆ ||
ನುಡಿದನೀರ್ವರುಮೆನ್ನಮಕ್ಕಳು |
ಕೆಡುಕನ್ನೈತಿಕ ಮಾಡಿರುವಿರೀ |
ತುಡುಗುತನಮಂ ಬಿಟ್ಟು ನಡೆಯಿರಿ ಮರೆಯಬಾರ್ದೆಂದ || ೧೬ ||

ಪರವಧುವಿನಾಕೂಡಿದವಗಂ |
ದೊರಕುವದು ದುಃಖದ ಯಮಾಲಯ |
ಪುರಿವ ಪುರಿಯಿಂಪಲ್ಲಿಯಿಲ್ಲಿಯ ನಾರಿ ಪೊಲು ಮಾಡಿ |
ಕರದಿ ಮುಟ್ಟೆಂಪೆನುತ ಮುಂದಕೆ |
ಭರದೊಳೊದೆಯುತ ದೂಡಿ ಶರಿರವು |
ಚುರುಚುರುನೆ ಸುಡುವಂತೆ ಮಾಳ್ಪರು ತಿಳಿಯಿರೆಂತೆಂದ || ೧೭ ||

ರೇಣುಕಾಂಬೆಯು ವಿಷಯವಾಸನೆ |
ಯಾನಲಾಗಳ್ ಸರ್ಪ ಸಿಂಬೆಯು |
ತಾನೆಯುಸುಕಿನ ಕೊಡವು ಮೂರಾಬಟ್ಟೆಯಂ ತಾಳೆ ||
ಆನನದ ಕಳೆಗುಂದಿ ಬೇಗುದಿ |
ಮಾನಿಸಳು ಮಿಗೆಯಾಗಿ ಖುಷಿಯಿಂ |
ದಾಣಕದ ಶಾಪಾಂತುದಂ ಕೇಳಿಲ್ಲವೇಯೆಂದ || ೧೮ ||

ತುರುತು ಸುಖಮಂ ಕುಡುವ ವಿಷಯದ ||
ಜರಿಗೆ ಬೀಳುತ ತಿಳಿಯದೆಲ್ಲರು |
ಮರುಳರಾಗುತೆ ಮಾಡಬಾರದ ಪಾಪ ಮಾಡುವರು ||
ಉರಿಯ ಹಚ್ಚಲಿ ನಾರಿ ಸಂಗಕೆ |
ಹರಸು ಮೋಹಿನಿ ರೂಪ ವಿಷ್ಣುವ |
ಬೆರೆತು ಸವಿಗಲಿಸಿದನು ಮೆಲ್ಲಗೆಂದು ಗುರು ನುಡಿದು || ೧೯ ||

ಇಬ್ಬರಿಗು ಸದ್ಬುದ್ಧಿಯಂ ಪೇ ।
ಳಿಬ್ಬಿಸುತೆ ಕಳುಹಿದನು ಮಠದಿಂ ।
ದೊಬ್ಬರೀತನು ನುಡಿದ ನುಡಿಯಂ ನಡಿಸಲಿಲ್ಲಾಗ ॥
ಅಬ್ಬರದಿ ದಿನ ಮಠಕೆ ಬರುವಾ ।
ಮಬ್ಬು ಮಲ್ಲನು ಬಿಟ್ಟು ಬಿಟ್ಟನು।
ಹಬ್ಬ ಹುಣ್ಣಿವಿಗಾದೊಡಂ ತಾಂ ಬರದೆ ತಪ್ಪಿಸುವ ॥ ೩೦ ॥

ಬಾರದುದನುಂ ನೋಡಿಯಜ್ಜನು ।
ಬೇರೆಯವರಂ ಕಳಿಸಿ ಕರಿಸಿದೊ ।
ಡಾರಿಗುಂ ಬರಲಿಲ್ಲನೈತಿಕದಿಂದೆ ಸರಿಲಿಲ್ಲ ॥
ದಾರಿಗೀತನು ಬರದೆಯಿರ್ದುದ ।
ಸಾರ ಯೋಗಿಯು ತಿಳಿದುಮೀತನ ।
ಶಾರಿರದೊಳಂ ಕಾಗಿ ರೋಗವು ಹಾಯಲೆಂತೆಂದ ॥ ೩೧ ॥

ಭರದೆ ರೋಗವು ಹಾಯ್ದು ಶುಭ್ರದ ।
ಶರಿರ ಬಣ್ಣವು ಪೋಗಿ ಪೊಲೆಯರ ।
ಕರಿದು ಕಾಗೆಯವೋಲು ಕಪ್ಪದಡರ್ದು ಹಸಗೆಟ್ಟು ॥
ಪಿರಿದು ತೋರಲ್ ಕನ್ನಡಿಯೊಳಂ ।
ವಿರಸ ಮುಖಮಂ ನೋಡಿಯಳುವಂ ।
ಸ್ವರವುಮಾದೊಡು ಕಾಗಿ ಸ್ವರದೊಲುಮಾಗಿ ನುಡಿಯಡಗಿ ॥ ೩೨ ॥

ಮನದ ಶಾಂತಿಯುಮಳಿದು ಮೈಕೈ ।
ಯ್ಯನುದಿನವು ಚುರ್ಚುವದು ನರಗಳೊ ।
ಳನಿಯತದ ಮಿಗೆ ಹೊಡೆತ ಪೊಟ್ಟೆಯ ಕಡೆತ ಮೊದಲಾದ ॥
ಅನುಚಿತದ ಹಲವಾರು ನೋವಿಂ ।
ದನಲವಿಟ್ಟಂತಾಗಿ ಕುದಿವಂ ।
ವನಿತೆಯುಂ ತಾಂ ಬಿಟ್ಟಳಿವನ ವಿರೂಪಮಂ ಕಂಡು ॥ ೩೩ ॥

ಬಳಬಳಲಿ ಸಾಕಾಗಿ ವೈದ್ಯರ ।
ಬಳಿಗೆ ಪೋಗಲು ನಾಡಿ ಸರಿಯಿಃವೆ ।
ತಿಳಿದು ನೋಡ್ದೊಡೆ ಶಾಪ ತಟ್ಟದೆ ಆವದೋ ಯತಿಯ ॥
ನಿಲದೆಯುವರಿಗೆ ಬಿದ್ದು ಬೇಡಿಕೊ ।
ಕಳೆಯು ಪೋಗ್ವದು ಸಕಲ ವೇದನೆ ।
ಬೆಳಗುವೆಯು ಮೊದಲಂತೆಯೆಂಬುತ ಕಳುಪಿದರುಮಿವನಾ ॥ ೩೪ ॥

ಬಂದುಮಜ್ಜನ ಪಾದದಬ್ಜಕೆ ।
ತಂದ ಪತ್ರಿಯುನಿಟ್ಟು ವಂದಿಸಿ ।
ಯಿಂದುಮೆನ್ನಪರಾಧಮಂ ಕ್ಷಮಿಸೆಂದು ಪ್ರಾರ್ಥಿಸುತ ॥
ಬಂದ ಕಣ್ಣೀರೊರಸಿಕೊಳ್ಳುತ ।
ಮೆಂದಿಗಿನ್ನುಂ ಪಾಪ ಮಾಡೆನು ।
ಸಂದ ಹೊಲಮನೆ ಮತಕೆ ನೀಡುವೆನೆಂದು ಕುಳಿತುಕೊಳೆ ॥ ೩೫ ॥

ನಿನ್ನದಾವೀರಾರು ಕೂರಿಗಿ ।
ಚಿನ್ನಪೊಲಮುಂ ಮನೆಗಳೆಲ್ಲವು ।
ಮಿನ್ನುಮಾಹೊಲೆಮಾದಿಗರ ಪಾಲಾಗಲೆಂತೆಂದು ॥
ಹೊನ್ನು ಮಣ್ಣಿನ ಆಸ್ತಿಯಾಸೆಗ ।
ಳನ್ವಿತನು ನಾನಲ್ಲವುನ್ನಿಸೆ ।
ಧನ್ಯನೀತಿಗಳಾಸೆ ಬೇಕೆಂತೆಂದು ಕಳುಪಿದನು ॥ ೩೬ ॥

ಮುಂದೆಯುವನುಂ ಕಾಗಿ ರೋಗದಿ ।
ಬೆಂದು ಸತ್ತನುಮುವನ ಪುತ್ರನು ।
ಚಂದ ಹೊಲಿಸೂಳಿಯುನು ತಂದಾಕಿಂಗೆಯಾಸ್ತಿಯನು ।
ಸಂದೆಗಿಲ್ಲವೆ ಬರೆದು ಕೊಡುವುತ ।
ದುಂಡುಗಾರಿಕೆಯಿಂದೆ ಹಾಳನು।
ಮುಂದಮತಿಯಿಂ ಮಾಡಿದಂ ಯತಿ ನುಡಿದವೋಲಾಯ್ತು ॥ ೩೭ ॥

ಸಾಧುವಜ್ಜನು ನುಡಿದ ನುಡಿಯುಂ ।
ಬಾಧೆಯಾಗದ-ಮೆಲ್ಲಿಯುಂ ತಾಂ ।
ಸಾಧಿಸುತ್ತದರಂತೆ ನಡೆವಗೆ ಲಭಿಸುವದು ಮುಕ್ತಿ ॥
ವಾದಿಸದೆ ಕಾಣುಹವನಡಗಿಸಿ ।
ಬೋಧೆಯೊಳು ಮನ ನಿಲಿಸಿಯಾತನ ।
ಪಾದಮಂ ಪೂಜಿಪ್ಪನರಗೇಂ ಡಾವರಿರುತಿಹುಗೇ ॥ ೨೮

ಬೇಡಿದಾ ಬಯಕೆಯನು ಜೀವಗೆ ।
ನೀಡುವಾತನು ಗುರುವು ಜಗದೊಳು ।
ನಾಡೆ ಮೇಲ್ಮಣಿಯಾಗಿ ಶೋಭಿಪ ತಾನೆ ತನ್ನೊಳಗೆ ॥
ಕೋಡಿ ನರರಿವನೇನು ಬಲ್ಲರು ।
ಸಾಡೆ ಸಾತನುಮೆಂದು ಬೈಯ್ಯುತ ।
ಕಾಡುತಿಹರಿವನಿಂದೆಯಂತ್ಯಕೆ ಪೆಟ್ಟು ತಿಂಬುವರು ॥ ೨೯

ವಿಶ್ವ ಶಿಲ್ಪದ ಕುಶಲ ಹಸ್ತನು ।
ವಿಶ್ವ ಮಂದಿರ ವರ ಗೃಹಸ್ಥನು ।
ಸುಸ್ವರದಿ ವೇದಗಳು ಪಾಡುವ ಸ್ವಸ್ಥ ಚಿತ್ತಕನು ।
ವಿಶ್ವ ವಿಷಯದ ಸ್ವತ್ತುಗಾರನು ।
ವಿಶ್ವ ನಾಶ ದುರಸ್ತಿವಾನನು ।
ವಿಶ್ವಮಂ ದಾಂಟಿಸುವ ಬೆಸ್ತೆಂದಜನವಂದಿಪೆನು ॥ ೩೦

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮಠ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೮ನೇ ಅಧ್ಯಾಯವು ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೨೮೧

# ೯ ನೇ ಅಧ್ಯಾಯ

**ಸೂಚನೆ :**

ನರರಿಗೊದಗುವ ಬಾಧೆಯಂ ಮು ।
ನ್ನರುಪಿಯದನುಂ ಸೈಪಿಡುವ ನೀಂ ।
ಗುರು ದಿವಾಕರ ಪೊರೆಯೊ ಗುಡಿಸಾಗರದ ಋಷಿವರ್ಯ ॥ ಪಲ್ಲ ॥

ಒಲೆದು ಶಾಸ್ತ್ರಕೆ ಬರುವಿಯಾಯೆನೆ ।
ಪೊಲದೊಳಂ ನಾಂ ಸಂಜೆವನ್ನೆಗು ।
ನಿಲದೆ ದುಡಿದುಡಿದಾಯುಸವುನುದೊಡರ್ಪಿ ಪೆಣವಾಗಿ ॥
ಒಲೆಯ ಮುಂದುರಿ ಕಾಸುತಂ ನೆರೆ ।
ಕುಳಿತುಕೊಂಡಿಪ್ಪುದುದು ಕಾಂಬದೇ ।
ಪಲವು ಮಾತಿಂತೆಂದು ಕಳಿಪಂಗೊಳಹನಿಡು ಶಿವನೆ ॥ ೧ ॥

ರೋಣದೊಳಗೊಂದಾನುಸಮಯದಿ ।
ಜಾಣನಾದೀ ಸಾಧುವರನುಂ ।
ಕೋಣೆಯಿಂ ಪೊರಮಟ್ಟು ಮಠದಂಗಣದಿ ನಿಂತಿರಲು ॥
ಆನೆಯಂಬೋಲಿರ್ಪ ಹಯಮಂ ।
ಜೀನಿನಿಂ ಸಿಂಗರಿಸಿಯದರ ವಿ ।
ತಾನ ಬೆನ್ನಾಶ್ರಯಿಸಿ ಸುತೆಯುಂ ಕೂರ್ಪಿಸುತಲೊಬ್ಬ ॥ ೨ ॥

ನಾಗರಿಕ ಬರುತಿರ್ಪುದಂ ಕಂ ।
ಡಾಗಳವನಂ ಕರೆದಡಾಯಿಸಿ ।
ಪೋಗದಿರು ನೀನೀಗ ವಿಘ್ನವು ನಿಂತಿಪುದು ಮುಂದೆ ॥
ಆಗದೀಮಾತೆನುತಲಾತನು ।
ಯೋಗಿ ವಚಮಂ ಮೆರ್ಚದಲ್ಲಿಂ ।
ಸಾಗಿದಂ ಮುಂದಡಿಯಿಡುತ್ತಲಿಯಶ್ವನುಂ ಪಿಡಿದು ॥ ೩ ॥

ಕೆಲ್ಲಯಿಸಿ ಸಾಧುಗಳುಮೆಲಲೋ ।
ಪುಲ್ಲೆಗರ ನುಡಿಯಂ ವಿಚಾರಿಸು ।
ತೆಲ್ಲಿ ಕೂರ್ಪುದು ವೇಳ್ಯೆಯಾಗಿಹುದೆಂದು ನೀನರಿದು ॥
ಅಲ್ಲಗಳೆದೆಮ್ಮುವನು ಪೊರಟೊಡೆ ।
ಗೆಲ್ಲಲಾರೆಯು ಮುಂದಿನೆಡರಂ ।
ಪೊಳ್ಳಿ ಬಾರೆಂತೆಂದುಮವನಾ ಬಾಹುಮಂ ಸೆಳೆಯೆ ॥೪

ಅಂದನಾತನುಮಾಗಳಜ್ಜಗ ।
ಮಿಂದಿನಾ ದಿನವಿಲ್ಲಿಯುಳಿದೊಡೆ ।
ತಂದ ಪಾಥೇಯವು ನಿರಸಮಂ ಪೊಂದೆ ಬೀಸಾಡಿ ॥
ಕಂದಕದೊಳಿಡುಕಿದೊಡೆಮಿದುಯೇಂ ।
ತಿಂಮುದಲ್ಲೆಂದೆನುತ ಬುತ್ತಿಯ ।
ಮಂದಹಾಸದಿ ಬಣ್ಣಿಸಿದ ಕೈಸರೆದು ನಗುವಂತೆ ॥೫

ಎಳ್ಳು ಪಚ್ಚಿದ ಸೆಜ್ಜೆ ರೊಟ್ಟಿ ಗು ।
ರೆಳ್ಳ ಪಿಣ್ಯಾಕ ಕೊರೆದ ಹಿಟ್ಟಿನ ।
ಪಲ್ಲೆ ಚೆಲ್ವಮುಸಾಲಿ ದೋಸೆ ಷುವಾಸಿಕೆಣಗಾಯಿ ॥
ಒಳ್ಳೆ ತುಪ್ಪದಿ ಕರದ ಪುರಿ ಗಡಿ ।
ಕಲ್ಲಸಕ್ಕರಿ ಪೂರಿಯುಂ ಕುಡು ।
ವಳ್ಳಿ ತುಂಬುವ ಖೀರು ಸಾರು ಬಿರಂಜಿ ಸಹಿತುಂಟು ॥೬

ಇದರ ಮೇಲಿನ್ನೊಂದು ವಾರ್ತೆಯ ।
ವಿದಿತ ಪಡಿಸುವೆ ನಿಮುಗಮೊಗಳೆ ।
ಚದುರೆಯಂ ಕರತಂದುಮೊಪ್ಪಿಸದಿರ್ದೊಡೀಪೊತ್ತು ॥
ಸೆದೆದು ಗೃಹಮಂ ಒಡಿಸಿಯುವಳಂ ।
ನದಿಯೊಳುಳಿಸುವೆನೆಂದುಮುಳಿಯುನು ।
ಮುಥಟನಿಂ ತಿಳಿಸಿಹನದಕ್ಕೀ ತವಕಮಂ ಮಾಳ್ಪೆ ॥೭

ಈಗೆನಗನುಜ್ಞೆಯನುಮಿತ್ತನು ।
ರಾಗದಿಂದಂ ಪೋಗಗೊಟ್ಟೊಡೆ ।
ಬೇಗ ಮಗಳಂ ಕಳುಪುತಲ್ಲಿಂ ಪೊರಳ್ದು ನಾಂ ಸಾರ್ವ್ವೆ ।
ಜೋಗಿನಿಂದೊಂದಿನವುಳಿದುಮಿೂ ।
ಯಾಗರದಿ ಗುರುಸೇವೆಯಂ ತಲೆ ।
ಬಾಗಿ ಗೈದಾಶ್ರಮಕೆ ಗಮಿಪೆಂದೆಂಬ ನುಡಿ ನುಡಿದಂ ॥ ೮ ॥

ಕುದುರಿ ಮೇಲೇರಿರ್ದವಾತನ ।
ಹದುಳಿಯಜ್ಜಗವಾನು ಚದುರನ ।
ಮೃದುಲ ಮುಖಮಂ ಕಾಂಬದೆನಿತೋ ದಿನಗಳಾಗಿಹವು ॥
ನೆದರಿಗಿಂದೇ ಬೀಳವೇಳ್ಕೆಂ ।
ದುದಯದೊಳು ಪೊರಟಪ್ಪೆನದರಿಂ ।
ದೆದರ ಭಯನೆಂದರಚಿಯೈದಳು ತಂದೆಯೊಡವೆರಸಿ ॥ ೯ ॥

ಆಗಳಾರ್ಯನು ಭಕ್ತ ಜನಕಂ ।
ಹೇಗಿರುವರೀ ಜನರು ನೋಡಿರಿ ।
ಗೋಗರೆದು ನಾಂ ಪೇಳ್ದೊಡಂ ಮುಯ್ವಾಂತು ನಿಲ್ಲದಲೆ ॥
ಪೋಗಿ ಬಿಟ್ಟರು ಮಿೂರಿ ನುಡಿಯಂ ।
ಬೇಗೆ ತಪ್ಪದುಮಿಂಥ ಜನಕೆಂ ।
ದೋಗಡಿಸಿ ತಿಳುಪಿದನು ವೇದದ ವಿಷಯಮಂ ಬಿಚ್ಚಿ ॥ ೧೦ ॥

ಆರು ವೇದ ಪುರಾಣಗಳ ಶರ ।
ಣಾರಗಳ ಸದ್ಗುರು ಮಹಾತ್ಮರ ।
ಕಾರಭಾರಕವೊಪ್ಪಿಯುವರಾವಚನಮಂ ಕೇಳ್ದು ॥
ಭೂರಿಯೊಲೆದದರಂತೆ ನಡಿವರೊ ।
ಕೈರವಿಯ ಬೆಳಕಂತೆ ಬೆಳಗುತ ।
ಗೌರಿಪತಿ ಸಾನಿಧ್ಯಮಂ ಪೊಂದುವರು ಚಲ್ವೆರಸಿ ॥ ೧೧ ॥

ಅರುಮಾವಾಕ್ಯವನೆ ಸಂಬದೆ ।
ದೂರು ಸರಿಡುಲ್ಲಂಘಿಪರುಮವ ।
ರಾರವಾರಕೆ ಬಿದ್ದು ಸಂಸೃತಿಯಗ್ನಿಯೊಳು ಕುದ್ದು ॥
ಧೀರ ಯಮನಿಂ ಮುಂದೆ ಜೋಚದ ।
ಬಾರ ಕೋಲಿಂ ಬಡಿತಮಂ ತಿಂ ।
ದಾರತಿಯಂ ತಾವ್ ಪೊಂದಧೋಗತಿಗಿಳಿಯು ತಿಹರೆಂದ ॥ ೧೨ ॥

ಸೀತೆಯಂ ಬಿಡುವಿಲ್ಲವಾದೊಡೆ ।
ಭೂತಮಂ ನುನೆ ಪುಗಿಸಿ ಕೊಂಡಂ ।
ತೇತಕೀ ಯಭಿಹಾರ ನಿನಗೆಂತೆಂದು ಮಾರುತಿಯು ॥
ಓತು ಪೇಳ್ದೊಡು ದುಷ್ಟ ರಾವಣ ।
ಕೋತಿ ಮಾತೇನೆಂದುಪೇಕ್ಷಿಸಿ ।
ಸಾತಿಶಯ ಸಂಭ್ರಮದೊಳಿರೆ ಮುಂದರಿವರವನಸುವ ॥ ೧೩ ॥

ಐದು ಮೂರುಂಬಳಿಯನಿತ್ತು ವಿ ।
ಷಾದಮಂ ನೆರೆಕಿತ್ತು ಮುದವಿಂ ।
ಸೋದರೈವರ ಕೂಡವಿರ್ಪುದು ಹಿತ ಕ್ಷಮೆಂತೆಂದು ॥
ಆದರದಿ ಭೀಷ್ಮಾದಿ ಪೇಳ್ದೊಡು ।
ಕೈದೆಗೆದು ಕೌರವರು ನಿಂತಪ ।
ವಾದಮೈದುತೆ ಕಡೆಗೆ ನಿಸ್ಸಂತಾನವಾದರಲಾ ॥ ೧೪ ॥

ಪರರಸತಿಗಳುಪಿದೊಡೆ ಪಾತಕ ।
ದುರಿಯು ನಿನ್ನನು ಸುಡುಗು ತಪ್ಪದು ।
ಪಿರಿಯರಿಂದುರುಮಿಕೆಯನಾಂತಿಹ ನಮ್ಮ ಮನೆತನವು ॥
ಅರೆ ನಿಮಿಷದೊಳುರಿದು ತಾನರೆ ।
ವರಿಸುವದುಮೆಂದಾ ಸುಧೇಷ್ಣೆಯು ।
ಕಿರಿಯು. ಕೀಚಕಗೊರೆದಳಾಲಿಸದಾತ ಕೆಟ್ಟನಲಾ . ॥ ೧೫ ॥

ತಂದೆ ವಚನಮಂ ರಾಮಚಂದ್ರನು ।
ನಂದದಿಂದಲಿಯೊಪ್ಪಿ ವನಮಂ ।
ಪೊಂದಿ ಸಲೆ ಪದಿನಾಲ್ಕು ವರ್ಷವ ಕಳೆದು ಜನರಿಂಗೆ ।
ಅಂದವಾದಾ ಪಿತೃ ಭಕ್ತಿಯ ।
ಸಂಧಿಸುವ ಬಗೆಯಂ ವಿಚಾರಿಸಿ ।
ಚಂದದಿಂ ತಿಳುಪಿದನು ದೇವ್ತರು ಮಾನ್ಯ ಮಾಳ್ಪಂತೆ ॥ ೧೬ ॥

ತಾಯಿ ನುಡಿಯಂ ಕೇಳ್ದು ಪಾಂಡವ ।
ರೈಯ್ವರುಂ ದ್ರೌಪತಿಯ ಕರಮಂ ।
ದಾಯಿಗರ ನೆರವಿಯೊಳಗಂ ಪಿಡಿದರು ಮಹೋತ್ಸವದಿ ॥
ಆಯತಿಕೆಯಿಂ ಮಾತೃ ಭಕ್ತಿಯ ।
ನಾಯುಗ ಯುಗಾಂತರುಳಿಸಿಹರವ ।
ರಾಯತಿಯನುಮದಾರು ವರ್ಣಿಪರೀ ಜಗಾಲಯದಿ ॥ ೧೭ ॥

ಇಂದಿನಾ ಕಲಿ ಕಾಲದೊಳಗಂ ।
ಮಂದಮತಿ ಜನರುಣ್ಮಿ ನಲ್ಮೆಯ ।
ತಂದೆಯಾ ನುಡಿಯಾಲಿಸದೆ ಪುನ ಬಂದ ಪದನದಲಿ ॥
ಅಂದಮಂ ಪಡೆಯುತ್ತಮವನನೆ ।
ಮಂದಿಯೊಳವಮರ್ಯಾದೆ ಗೈದು ಸು ।
ವಂದನೆಯ ತಂದೆಯನು ಕೊಂದಧಿನಾಥರಾಗಿಹರು ॥ ೧೮ ॥

ಗಂಡನಾ ನುಡಿಯಂ ತನೂದರಿ ।
ಮಂಡಿಸದೆ ತಾಂ ಸ್ವೇಚ್ಛೆಯಿಂದಲಿ ।
ಕಂಡ ಕಡೆಗಂಡಲೆವಳಂಜದೆ ಬೀದಿ ನಾಯಂತೆ ॥
ಉಂಡು ಮನೆಯೊಳಿರೆಂದುಸುರ್ದೊಡು ।
ಬಂಡ ಬಂಡಾಯವನೆ ಹೂಡುತ ।
ಗುಂಡುಕಲ್ಲಿಂ ಮಂಡೆಗೊಗೆಯುವ ಪುಂಡಳಾಗಿಹಳು ॥ ೧೯ ॥

ಇಂತು ಪಿರಿಯರ ವಚನಮಿರ್ದೊಡು ।
ಕಂತು ವೈರಿಯು ಮುಂದೆಯಿವರಂ ।
ಸಂತತಂ ಸುಡುಗಾಡದಲ್ಲಿಹ ವೃಕ್ಷಮಂ ಮಾಡಿ ॥
ಅಂತವರ ಮೇಲ್ ಹಪ್ಪು ಕಳಗಳು ।
ಕುಂತು ಪಲಲವ ತಿಂಬುವೊಲು ಮಾ ।
ಸಂತಸದಿ ಮಾಡುವನುನುದರಿಂದರಿವುಮಿರವೇಳ್ಕುಂ ॥ ೩೦

ಇತ್ತ ಸಭ್ಯಗೃಹಸ್ಥನಾತನು ।
ಮುತ್ತಮೋತ್ತಮ ಪಳಮೆ ನಿಚಯವ ॥
ಮತ್ತಮೆಗಮರಪುತ್ತೆ ನಡದಿರೆ ರಾಜಮಾರ್ಗದೊಳು ॥
ಎತ್ತರದ ನಿಂಬೊಂದುಮೆದರಿಗ ।
ಮುತ್ತಮಿಕೆಯಿಂ ನಿಂತಿರಲದರ ।
ನೆತ್ತಿ ಮೇಲಿಹ ಕಾಗಿಯುನ್ನದನಾತಮಂ ಪಿಡಿದು ॥ ೩೧

ಪಾರಿಯಿವರೆಡೆಗೈದು ಸುತ್ತುತ ।
ಮೇರ ದನಿಯಿಂದರಚಿ ಬುತ್ತಿಯ ।
ಪೇರ ಗಂಟಿನ ಮೇಲೆ ಕೂರ್ಪಲು ನಾರಿ ಪೇರುಲಿದು ॥
ಪಾರಿಸಲು ಕೈಚಾಚೆ ಮುಂದಕೆ ।
ಚೂರಿಯುದನುಂ ತಿರುಗಿ ಮೋರೆಗೆ ।
ಕಾರ ಗರಿಯಿಂ ಬಡೆದು ಶಿರಮಂ ಕುಸುಕಿಯಾ ಬಳಿಕ ॥ ೩೨

ತಲೆಯ ಮೇಲ್ ಕುಳಿತಿಂತು ಶಕುನವ ।
ತಿಳುಪಿ ಪಿರಿಯನ ಹತ್ತಿರಂ ಪೋ ।
ಗಲು ವಿರಾವದಿಯಾತದಂ ಪಾರಿಸಲು ಯತ್ನಿಸಿದ ॥
ಅಳುಕದದು ಚಂಚುವಿನ ತುದಿಯಿಂ ।
ತಲೆ ರುಮಾಲವ ಸೆಳೆಯುತವನಾ ।
ತಲೆಯ ಮೇಲ್ ಮಲ ಬಿಟ್ಟು ಕಾಕಾಯೆಂಬ ಕರ್ಕಶದ ॥ ೩೩

ನಿನದವಂ ಗೈಯ್ಯುತ್ತೆ ಕುದುರೆಯು ।
ಸನಿಹಕೈದುತ ಗಿರಿಕೆ ಪೊಡೆವುತ ।
ಮೊನಚು ಮುಖದಿಂ ಕಣ್ಗೆ ಮೋರೆಗೆ ಬೆದಕಿ ತಡಿಮಾಡಿ ॥
ಅನವಕಾಶದೀರುವುದರ ಪುಗುವುತೆ ।
ಕಣಬವಂ ಸಲುಗಿಸೆಯನಂತರ ।
ಚಣದೊಳೆಯುದು ಬೆದರಿ ಮುಂದಿನವೆರಡು ಪದಗಳನು ॥ ೨೪ ॥

ಮೇಲಕೆತ್ತಲ್ ಚೀರಿ ಚಿಟ್ಟನೆ ।
ಯೋಲಿ ಬಾಲೆಯು ಮೇಲಿನಿಂದಲೆ ।
ಫೂಲಿ ನಾಕೆಳಭಾಗಕಮುರುಳೆ ತಲೆಗೆ ಶಿಲೆ ಬಡಿದು ॥
ಕಾಲವಾದಳು ತಚ್ಛಣದೊಳಂ ।
ಕಾಲಿನಿಂ ಪಿಂದಿರ್ದ ಸಿತನಂ ।
ಮೂಲ ತಾಣಕನೊದ್ದು ನಿಲ್ಲದೆಯೋಡಿತದು ಬೇಗ ॥ ೨೫ ॥

ಬಿದ್ದ ಬೊಪ್ಪಾತುರದೊಳೇಳುತ ।
ಮುದ್ದು ಮಗು ಸತ್ತುದನು ಕಾಂಬುತ ।
ಬಿದ್ದನಾ ಕ್ಷಣ ಮರುಳಿ ಮಿಸುಕದೆ ಮೂರ್ಛೆಯಂ ಪೊಂದಿ ॥
ಎದ್ದು ಬಳಿಕವನತ್ತು ಶವದಾ ।
ಮುದ್ದಿಯಂ ತಕ್ಕೊಂಡು ಬಂದುಂ ।
ಸುದ್ದಿಯಂ ಮುಟ್ಟಿಸುವಿನಂ ಸಾಧುಗಳದನುಮರಿದು ॥ ೨೬ ॥

ಎಲೆಲೆ ನಿಗ್ಗಡಿ ಮತ್ತೆ ಬಂದಿಯೊ ।
ಹಲುಬಿಕೊಂಡೊಡು ಕೇಳದೈದೀ ।
ಪೊಲಬನುಂ ಮುಂಗಾಣ್ದು ನಿಂತಿಹೆನರುಪುದೇನುಂಟು ॥
ವಲಯದೋಳ್ ನಡೆವಂಥ ವಾರ್ತೆಯ ।
ನಿಲಯದಿರ್ದೊಡು ತಿಳಿದು ಕೊಳ್ವೆವು ।
ತಿಳುಪುವದು ನಮಗಿಲ್ಲ ಪೆಣ ಕಟಗೊಂಡು ನಡೆಯೆಂದ ॥ ೨೭ ॥

ಅಳುತಲಾಶಕ್ಕು ನೆರೆದ ಜನರಿಗೆ ।
ತಿಳಿಯಲಿಲ್ಲೀ ಸಾಧುವರ್ಯನ ।
ಮಲಗಣಿಸಿ ನುಡಿ ಮೀರಿ ಫಲಮಂ ಕಂಡೆ ನಾನಿಂದು ॥
ಅಲರಿಜಗು ಮೇಲಿಪ್ಪನೆಂಬುತ ।
ಮುಲುಪುತಂ ಕೈಯೆತ್ತಿ ನುಡಿವೆಂ ।
ನಲಿದಿವನ ನುಡಿಯಂತೆ ನಡೆವವ ಪಡೆವ ಪರಮುಕ್ತಿ ॥ ೨೮ ॥

ಅರುಪಿಯಾತಂ ಪೋದ ಬಳಿಕಾ ।
ನೆರೆದ ಜನ ಗುಡಿಸಾಗರೇಂದ್ರನ ।
ಚರಣಮಂ ಪನ್ನೀರಿನಿಂ ತೊಳೆದಲರುಮಂ ಮುಡಿಸಿ ॥
ಹರುಷದಿಂದರ್ಚಿಸುತಮಿಂತಃ ।
ಕರುಣಿ ನಿನ್ನಯ ತಪದ ನುಡಿಯಂ ।
ಮರೆಯದಾಲಿಸಿ ನಡೆವೆವೆಂತೆಂದೆನುತೆ ಪೊಗಳಿದರು ॥ ೨೯ ॥

ಕಾಯುವವ ನೀ ಕೊಲ್ಲುವವ ನೀ ।
ಜೀಯ ನಂದೇನುಂಟು ನಿನ್ನದೆ ।
ಕೈಯ್ಯ ಬಾಯಯು ನಡೆಯುತಿಹುದೀ ಮೂರು ಲೋಕದೊಳು ॥
ಸಾಯಲಳುತಿಹೆನಾದೊಡಂ ನೀಂ ।
ನ್ಯಾಯ ಪಥಮಂ ತೋರ್ದು ನನ್ನಯ ।
ಮಾಯೆ ಮದಮಂ ನಿಗುಚಿ ಕಾಪಿಡು ಪಾರ್ವತೀ ಪತಿಯೆ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೯ನೇ ಅಧ್ಯಾಯವು ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೩೦

# ೧೦ನೇ ಅಧ್ಯಾಯ

**ಸೂಚನೆ :**

ಸೊಟಕನಾಳದ ಗೌಡನೊಬ್ಬಟ ।
ಮಟದಿ ಪುತ್ರನಿಗಾಸ್ತಿಯಂ ಕುಡು ।
ದಟತಟಿಸಿದುದು ಸಾಧು ಶಾಪವನಾಂತುದಂ ಬರಿವೆ ||ಪಲ್ಲ||

ಸುಳ್ಳು ಭವಮಂ ನರ್ಜಲಾಪೆನು ।
ಬಲ್ಲವರ ಬಳಿಸಾರ್ದುಮಿದಕಂ ।
ಮುಳ್ಳು ಬಡಿವೆಂದೆನ್ನೆ ಪಿತನಿದ ಕೇಳ್ದು ಕೋಪದಲಿ ।
ಕಳ್ಳ ಸೂಳಿಯ ಮಗನೆ ನೀಂ ಮಿಗೆ ।
ಮಳ್ಳತನ ಬಿಡು ಲಗ್ನವಾಗೆಂ ।
ದೊಳ್ಳೆ ಕನ್ನೆಯ ಕೈಪಿಡಿಸುವಗು ಶಿವನೆ ನಿಜ ತೋರ್ವೆ || ೧ ||

ಒಮ್ಮೆ ಸೊಟ್ನಾಳ್ ಗೌಡರಿಬ್ಬರು ।
ತಮ್ಮ ಪೊಲಮನಿಯಾಸ್ತಿಗಾಗಿಯೆ ।
ತಮ್ಮೊಳಗೆ ಕಲಹವನು ನಡಸಿರೆ ಮುಗಿಯದದು ಮುಂದೆ ॥
ಉಮ್ಮಗೇ ಪರ್ಬುವದೆನುತ್ತಲಿ ।
ಯುಮ್ಮಳಿಸಿಯಾವೂರ ಪಿರಿಯರು ।
ನೆಮ್ಮುತಿಬ್ಬರ ಮಧ್ಯೆ ಸರಿ ಪಾಲಿಡೆಯದಂ ನೋಡಿ || ೨ ||

ತಂದೆ ಬಸಲಿಂಗ ಗವುಡಂ ತಾಂ ।
ಪೊಂದಿದೊಡುಮುತ್ತಮದ ಪೊಲಮಂ ।
ಬಂಧುರದ ಮಾಸೌಧಮಂ ಮೇಲೆ ಚಿನ್ನಮಂ ಬಿಡದೆ ॥
ಕಂದನಿಗಮೆಳ್ಳನಿತು. ಸಲಿಸದೆ ।
ಸಂದು ಸಾಧಿಸಿ ಬಡಿದು ತನ್ಮನೆ ।
ಯಿಂದೆ ಪೊರ ನೂಂಕಿದನು ಮಗನಂ ಕರುಣಮಂ ತೊರೆದು || ೩ ||

ಆಗ ಗುಡಿಸಾಗರಕೆ ಯಾತಂ ।
ಪೋಗಿ ದೇಶಿಕ ಸಾಧುವರ್ಯಗೆ ।
ಬಾಗಿ ಸಾದ್ಯಂತೆಲ್ಲ ಸುದ್ದಿ ನಿರೂಪಿಸಿದನಳುತ ॥
ಐಗಳದನಾಲಿಸುತೆಯವನಂ ।
ಬೀಗನಂತುಪಚರಿಸಿಯಲ್ಲಿಂ ।
ಬೇಗ ಪಸುಬೆಯ ಪೊತ್ತು ಗೌಡಗೆ ನಡೆಯು ನೀನೆನ್ನೆ ॥ ೪ ॥

ಗುರುವೆ ಯಾತನು ನೋಡಿಯನ್ನಂ ।
ಕರಗುಮಾಡುವ ಮುಖದ ಹೊಳಪಂ ।
ಕರುಣಮಂ ನೆರೆಗಳೆದು ತಾಂ ಬರುತಿಹನು ಪೊಡೆಯಲಿಕೆ ॥
ಅರಿವುಮಿಲ್ಲ ಸುಪುತ್ರನೆಂಬುದು ।
ಕರಕೆ ಸಿಕ್ಕದನೆತ್ತಿ ಪೊಯ್ವಂ ।
ನರಡನವನೆಡೆ ನೀವೆಯೊಬ್ಬರೆ ಗಮಿಸಬೇಕೆಂದ ॥ ೫ ॥

ಮುಂದೆ ನಾನಿರುತಿಪ್ಪೆನಾತಗೆ ।
ಚಂದವಾಗಿ ಸುಬುದ್ಧಿ ಪೇಳ್ವೆಂ ।
ನೊಂದಿಕೊಳ್ಳಲು ಬೇಡ ಮನದೊಳು ಧೈರ್ಯವಿರಲೆಂದು ॥
ಅಂದುವಜ್ಜನು ತನ್ನ ಸಂಗಡ ।
ನಂದದಿಂ ಕರಕೊಂಡು ಶೀಘ್ರದಿ ।
ಬಂದು ಬಿಟ್ಟನು ಸಂದ ಗೌಡರ ಮನೆಯ ಬಾಗಲಿಗೆ ॥ ೬ ॥

ಒಳಗೆಯೂಟಕೆ ಕುಳಿತ ಗೌಡನ ।
ನೊಲೆದು ಯತಿವರ ಕರಿಯೆ ಬಂದೀ ।
ತೆಳವು ದೇಹದ ಪುತ್ರನಂ ನೆರೆ ಕಂಡು ಮುಳಿದೆದ್ದು ॥
ಚಲುವ ಸಾಧುಗಳೆದಿರಿಗಿದ್ದೊಡು ।
ಹಲುಗಡಿದು ತೋಳೇರಿಸುತ್ತವ ।
ನೆಲಬು ಮುರಿವಂತೊಗೆದ ಕಟ್ಟಿಯ ಕೆಳಗೆ ನೆಗನೆಗಹಿ ॥ ೭ ॥

ಎಲವೊ ಮೂಢನೆ ಬಿಡು ಬಿಡೆಂಬುತ |
ಪಲುಬಿಕೊಂಡೊಡು ಬಿಡದೆ ಸಾಧುಗ
ಳುಲಿಯನುಂ ಲೆಕ್ಕಿಸದೆ ಪೇರ್ಗೋಲಿಂದೆ ಪೊಯ್ಯುತ್ತೆ ||
ತಲೆಯೊಡೆದು ಪದಮಂ ಮುರಿದು ಮು|
ತ್ತುಳಿದ ಶಿರಮಂ ಹಿಚುಕೆ ಕಂಡೀ |
ತುಳಿನದಿಲ್ಲೆಂತೆಂದು ತೆರ್ಕೆಯ ಬಡೆದು ಗೌಡರನು || ೮ ||

ಪಿಡಿಯುತಜ್ಞ ತೆಗಳ್ದು ಕೂದ್ರಿಸಿ |
ಕಡವರದಿ ಕಡುಗೇಡುಗಂ ನೀಂ |
ತಡೆಯಲಾರಿದನೋಡಿ ಯನ್ನಯ ಪೊಟ್ಟೆಯುರಿಯುತಿಪೆ ||
ಪೊಡೆಯ ಬೇಡೆಂದರಚಿಕೊಂಡೊಡು |
ಪೊಡೆದಿರಲಿದಿನ್ನೆಂಟು ದಿನದೊಳು |
ಮೃಡನು ನಿನ್ನನು ಪೊಡೆದು ಕೆಡುಹಲಿಯೆಂದು ಶಪಿಸಿದನು || ೯ ||

ಕಿರಿಯ ಗೌಡಗೆ ನೀನು ಚಿಂತಿಸ |
ದಿರು ಸಳೀಹನ ಸಕಲ ವಸ್ತುಗ |
ಳರೆ ಚಣದೊಳಂ ತವ ವಶಂಗೈವವೆನುತುಪಚರಿಸಿ ||
ಪಿರಿಯ ಹಸುಬೆಯ ಪೊತ್ತು ಪೋಗಲ್ |
ಕಿರಿ ನುಡಿಯಿದೇ ನೆನಗೆ ಮೂಳ್ಪುವ |
ದುರಿದು ಕಾಗೆಯ ಶಾಪ ಡೋರನಿಗೆಂದನಾ ಗೌಡ || ೧೦ ||

ಭೂಮಿ ಸೀಮೆಗಳಿಂತು ಜನರಿಗೆ |
ಕಾಮುಚಾರವ ಕಲಿಸುತಾಸೆಯ |
ನಾ ಮರಣ ಬಿಡದಂತೆ ಗೈಯ್ಸಿಸಿ ಕೊನೆಗೆ ಕರ್ಬುರರ |
ಪಾಮರತೆಯಂ ಪೊಂದಿಸುತೆ ಮಿಗೆ |
ಪ್ರೇಮಮಂ ಸ್ವಜನರೊಳು ಕಿಡಿಸಿ ತ |
ಪೋಮಹಿಮರೆಂಬುವವರಿರ್ದೊಡು ಪದದಿ ತುಳಿಸುವವು || ೧೧ ||

ಆಗ ಗುಡಿಸಾಗರಕೆ ಯಾತಂ ।
ಪೋಗಿ ದೇಶಿಕ ಸಾಧುವರ್ಯಗೆ ।
ಬಾಗಿ ಸಾದ್ಯಂತೆಲ್ಲ ಸುದ್ದಿ ನಿರೂಪಿಸಿದನಳುತ ॥
ಐಗಳದನಾಲಿಸುತೆಯವನಂ ।
ಬೀಗನಂತುಪಚರಿಸಿಯಲ್ಲಿಂ ।
ಬೇಗ ಪಸುಬೆಯು ಪೊತ್ತು ಗೌಡಗೆ ನಡೆಯು ನೀನೆನ್ನ ॥ ೪ ॥

ಗುರುವೆ ಯಾತನು ನೋಡಿಯನ್ನಂ ।
ಕರಗುಮಾಡುವ ಮುಖದ ಹೊಳಪಂ ।
ಕರುಣಮಂ ನೆರೆಗಳೆದು ತಾಂ ಬರುತಿಹನು ಪೊಡೆಯಲಿಕೆ ॥
ಅರಿವುಮಿಲ್ಲ ಸುಪುತ್ರನೆಂಬುದು ।
ಕರಕೆ ಸಿಕ್ಕದನೆತ್ತಿ ಪೊಯ್ವಂ ।
ನರಡನವನೆಡೆ ನೀವೆಯೊಬ್ಬರೆ ಗಮಿಸಬೇಕೆಂದ ॥ ೫ ॥

ಮುಂದೆ ನಾನಿರುತಿಪ್ಪೆನಾತಗೆ ।
ಚಂದವಾಗಿ ಸುಬುದ್ಧಿ ಪೇಳ್ವೆಂ ।
ನೊಂದಿಕೊಳ್ಳಲು ಬೇಡ ಮನದೊಳು ಧೈರ್ಯವಿರಲೆಂದು ॥
ಅಂದುವಜ್ಜನು ತನ್ನ ಸಂಗಡ ।
ನಂದದಿಂ ಕರಕೊಂಡು ಶೀಘ್ರದಿ ।
ಬಂದು ಬಿಟ್ಟನು ಸಂದ ಗೌಡರ ಮನೆಯ ಬಾಗಲಿಗೆ ॥ ೬ ॥

ಒಳಗೆಯೂಟಕೆ ಕುಳಿತ ಗೌಡನ ।
ನೋಲೆದು ಯತಿವರ ಕರಿಯೆ ಬಂದೀ ।
ತೆಳವು ದೇಹದ ಪುತ್ರನಂ ನೆರೆ ಕಂಡು ಮುಳಿದೆದ್ದು ॥
ಚಲುವ ಸಾಧುಗಳಿದಿರಿಗಿದ್ದೊಡು ।
ಹಲುಗಡಿದು ತೋಳೇರಿಸುತ್ತವ ।
ನೆಲಬು ಮುರಿವಂತೊಗೆದ ಕಟ್ಟೆಯ ಕೆಳಗೆ ನೆಗನೆಗಹಿ ॥ ೭ ॥

ಎಲವೊ ಮೂಢನೆ ಬಿಡು ಬಿಡೆಂಬುತ ।
ಪಲುಬಿಕೊಂಡೊಡು ಬಿಡದೆ ಸಾಧುಗ
ಳುಲಿಯನುಂ ಲೆಕ್ಕಿಸದೆ ಪೇರ್ಗೋಲಿಂದೆ ಪೊಯ್ಯುತ್ತಿ ॥
ತಲೆಯೊಡೆದು ಪದಮಂ ಮುರಿದು ಮ।
ತ್ತುಳಿದ ಶಿರಮಂ ಹಿಚುಕೆ ಕಂಡೀ ।
ತುಳಿವದಿಲ್ಲೆಂತೆಂದು ತರ್ಕಿಯ ಬಡೆದು ಗೌಡರನು ॥ ೮ ॥

ಪಿಡಿಯುತಜ್ಞ ತೆಗಳ್ದು ಕೂಡ್ರಿಸಿ ।
ಕಡವರದಿ ಕಡುಗೇಡುಗಂ ನೀಂ ।
ತಡೆಯಲಾರಿದನೋಡಿ ಯನ್ನಯ ಪೊಟ್ಟೆಯುರಿಯುತಿಪೆ ॥
ಪೊಡೆಯ ಬೇಡೆಂದರಚಿಕೊಂಡೊಡು ।
ಪೊಡೆದಿರಲಿದಿನ್ನೆಂಟು ದಿನದೊಳು ।
ಮೃಡನು ನಿನ್ನನು ಪೊಡೆದು ಕೆಡುಹಲಿಯೆಂದು ಶಪಿಸಿದನು ॥ ೯ ॥

ಕಿರಿಯ ಗೌಡಗೆ ನೀನು ಚಿಂತಿಸ ।
ದಿರು ಸಳೀಹನ ಸಕಲ ವಸ್ತುಗ ।
ಳರೆ ಚಣದೊಳಂ ತವ ವಶಂಗೈವವೆನುತುಪಚರಿಸಿ ॥
ಪಿರಿಯ ಹಸುಬೆಯ ಪೊತ್ತು ಪೋಗಲ್ ।
ಕಿರಿ ನುಡಿಯಿದೀ ನೆನಗೆ ಮಾಳ್ಪುವ ।
ದುರಿದು ಕಾಗೆಯ ಶಾಪ ಡೋರನಿಗೆಂದನಾ ಗೌಡ ॥ ೧೦ ॥

ಭೂಮಿ ಸೀಮೆಗಳಿಂತು ಜನರಿಗೆ ।
ಕಾಮಚಾರವ ಕಲಿಸುತಾಸೆಯ ।
ನಾ ಮರಣ ಬಿಡದಂತೆ ಗೈಯ್ಯಿಸಿ ಕೊನೆಗೆ ಕರ್ಬುರರ ।
ಪಾಮರತೆಯಂ ಪೊಂದಿಸುತೆ ಮಿಗೆ ।
ಪ್ರೇಮಮಂ ಸ್ವಜನರೊಳು ಕಿಡಿಸಿ ತ ।
ಪೋಮಹಿಮರೆಂಬುವವರಿರ್ದೊಡು ಪದದಿ ತುಳಿಸುವವು ॥ ೧೧ ॥

ಪೊಡವಿ ನಿನ್ನಯ ತಡವಿ ಪಾಂಡವ ।
ರಡವಿ ಪಾಲಾದರು ವಿಡಾಯಿಗ ।
ಳೆಡವಿ ಬಿದ್ದರು ಪೊಡವಿ ಪತಿಗಳು ಬಿಡರು ತವ ಗೊಡವಿ ॥
ಒಡನೆ ನಿನ್ನಯ ಯಾಸೆ ಪೆಚ್ಚಿಸಿ ।
ಕೆಡವಿ ಹಲ್ಲಂ ಮುರಿಸಿಯಿವರಂ ।
ಕಡೆಗೆ ಕೊಲ್ಲಿಸಿ ಕವಡಿಗಿಂ ಕಡಿ ಮಾಡಿ ನೀ ಬಿಡುವಿ ॥ ೧೬ ॥

ಅಣ್ಣನುಪವಾಸದಲಿ ಬಳಲ್ವದು ।
ಕಣ್ಣಿನಿಂ ನೋಡಿದೊಡು ತಮ್ಮನು ।
ಮನ್ನಮಂ ಕುಡುದಿಹನು ಮಣ್ಣನುಮಂತು ತಮ್ಮಂಗೆ ।
ಬೆನ್ನ ಬಿದ್ದುದು ಮರೆತು ತಮ್ಮೊಳು ।
ಚುನ್ನವಾಡ್ವರುಮಿನಿತು ಹೇವದ ।
ಕುನ್ನಿಗಳು ಹಿಸೆ ಕೊಡುವರೇ ತಾಮಸದ ಡೊಂಬಿಗರು ॥ ೧೩ ॥

ಬಳಿಯ ಪೊಲದಾ ಮೇರೆಯಂ ತಾವ್।
ತಿಳಿಯುತಿರ್ದೊಡು ಸಾಧಿಸುವರುಂ ।
ಪೊಲಸು ಸುಡಗಾಡಿರ್ದೊಡುಂ ಸಾಧಿಪರು ನಾಣ್ಚದಲೆ ॥
ಕೊಲುವ ಭೀತಿಯ ತೋರಿ ಪರರಾ ।
ಪೊಲ ಮನೆಯ ತಿಂಬುವ ದುರಾತ್ಮರು ।
ಸಲಿಸುತಿಹರೇ ಬರುವ ಹಿಸೆಯಂ ತಿಳಿದು ನೋಡಲ್ಕೆ ॥ ೧೪ ॥

ಗಾಣದೊಳಗಂ ಗೋಣು ಸಿಕ್ಕರೆ ।
ಯೂಣೆಯಾಗದಲುಳಿಯುತಿಹುದೇ ।
ಕೋಣನಾ ಕೂಡೊಮ್ಮೆ ಹಣೆ ಹಚ್ಚಿದೊಡೆ ಪ್ರಾಣವದು ॥
ಹಾನಿಯಾಗದೆಯುಳಿಯಬಹುದೇ ।
ಮಾನ ಹೀನರ ಕರದಿ ಸಿಕ್ಕ ಜ ।
ಮೀನು ಸುಮ್ಮನೆ ಬರುವದೇ ಕಾದಾಡದೊಂದಿನಿತು ॥ ೧೫ ॥

ಹೊನ್ನು ಹೆಣ್ಣನು ಮೇಲೆ ಮಣ್ಣನು ।
ಪನ್ನಗನ ಪೋಲೆಂದು ಪರಿಕಿಸಿ ।
ಚನ್ನ ಋಷಿಗಳು ಜಿಗಿದು ಪೋದರು ಸದನವಮಂ ಬಿಟ್ಟು ॥
ಅನ್ನವಮಂ ಪರಿತ್ಯಜಿಸಿ ಗಿಡಗಳ ।
ಹಣ್ಣು ತೊಪ್ಪಲ ಮೆಲ್ದು ಗಿರಿಗಳ ।
ಸಣ್ಣ ಹೊದರಾಶ್ರಯಿಸಿ ಕುಳಿತರು ಪೊರಗೆ ಬರದಂತೆ ॥ ೧೬ ॥

ದುರುಳ ಮಧು ಕೈಟಭರ ಮೇಧ ।
ಸ್ಸರಿದು ಮೇದಿನಿಯಾಯಿತೆಂಬುವ ।
ಪಿರಿದು ನುಡಿದನು ಗುರು ಚಿದಾನಂದಾರ್ಯ ಜಗದೊಳಗೆ ॥
ಅರಿಯುತೀ ಕಾರಣವ ಭೂಮಿಯು ।
ಪಿರಿಯಯಾಸೆಯು ನರರು ಗೈದೊಡೆ ।
ಶಿರದ ಮಿಮುಳಂ ತಗೆಸಿ ಕೊಳ್ವರು ವೈರಿ ಕರದಿಂದೆ ॥ ೧೭ ॥

ಮನೆಗಳಿಲ್ಲಿಯೆ ಪೊಲವುಮಿಲ್ಲಿಯೆ ।
ದನಕರಂಗಳು ತಾವು ಗಳಿಸಿದ ।
ಹಣವದಿಲ್ಲಿಯೆ ಕೊನೆಗೆ ತನ್ಮಯ ಪೆಣವುಮಿಲ್ಲಿಯದು ॥
ಇನಿತನರಿದೊಡು ಬಣಗು ಮನುಜರು ।
ನನಗಧಿಕ ನಿನಗಧಿಕಮೆಂಬುತ ।
ತುಣುಕು ಮಾಳ್ಪರು ಹರವಿಯುಂ ಹಂಚಾ?. ಮಾಡುವರು ॥ ೧೮ ॥

ನಡೆನುಡಿಗಳುಳದಿಲ್ಲ ಜಗದೊಳು ।
ಕಡಿದು ಪಾಕ್ವರು ಹಿಸೆಯು ಕೇಳ್ದೊಡೆ ।
ಕೆಡುಕ ಕೌರವ ಪಾಂಡವರಿಗಂ ಕೊಟ್ಟನೇ ಹಿಸೆಯು ॥
ಒಡಲಿನಾಸೆಗೆ ಬಿದ್ದವರು ।
ಕೊಡರು ತವ್ಮೊಡ ಹುಟ್ಟಿದವರಿಗು ।
ಪಡೆದ ಮಕ್ಕಳಿಗುಂ ಜನಕಗುಂ ನಿಯತಿಯಿದು ಜಗದಿ ॥೧೯॥

ಮನಿ ನರಕದಾ ಕುಣಿ ಸುಪೆಂಡತಿ |
ಶನಿ ಕುಮಾರರು ಶುನಿ ತನುವು ಮಿಗೆ |
ಮೊನೆಚು ಸೂಜೆಯ ಮೊನಿ ಸುಬಂಧುಗಳೆಲ್ಲ ಬಡಮಣಿಯು ||
ಎಣಿಸುವಾ ಧನ ಜೀವರಂ ನೆರೆ |
ಮಣಿಸಿ ತಳದೊಳು ಒಡೆಯುವಾ ಬೆಣೆ |
ಯುಣುವಿಡುವಯೆರಿಪೊಲವು ದುಃಖದ ಡೊಣೆಯುಮೆನಿಸುವದು ||೨೦||

ಇರಲಿದಿಲ್ಲಿಗೆ ಮುಂದೆ ಗೌಡನು |
ಪಿರಿಯ ಪೋಲಿಸಗೌಡ್ಕಿ ಹಮ್ಮಿಂ |
ದೊರೆವರಾರೆನಗೆಂದು ನಿಶ್ಚಿಂತತೆಯೊಳಿರೆ ಬಳಿಕ ||
ಮೆರೆವ ಗಡ್ಡೀಪೊಲದ ನ್ಯಾಯದ |
ವರ ವಿಚಾರವ ಗೈಯ್ಯುವದಕ್ಕಂ|
ಭರದೆ ಪೋಲಿಸರಿಂದೆ ಬಂದನಿಲಾಖಸಾಹೇಬ ||೨೧||

ಅಂದು ಚಾವಡಿಯೊಳಗೆ ಕುಳಿತು ನೀ |
ಬಂಧನಂ ಮಿಗೆ ತಿಳಿಯಲೋಸುಗ |
ಸಂದ ಗೌಡರ ಕರೆಯ ಕಳುಪಿದನಾತನೌಜಸದಿ ||
ಬಂದುಮೋಲೇಕಾರ ಕರೆದೊಡು |
ಬುಂದೆ ಸವಿ ಪಕ್ವಾನ್ನನವಮಂ ಬಲು |
ತಿಂದು ಮಲಗಿದ ಗೌಡ ಲೆಕ್ಕಿಸಲಿಲ್ಲವಾ ನುಡಿಯ ||೨೨||

ತಿರುಗಿಯೋಲೇಕಾರ ಬಂದುಂ |
ಬರದಲಿರ್ದುದುಮುಸುಕೆ ಮುನಿಸಿಂ |
ಕರೆಯ ಕಳುಪಿದನಾಗಳೆಲ್ಲಾ ತಂದ ಪೋಲಿಸರ ||
ಉರಿದು ಪೋಲೀಸರಿಗು ಕೆಮ್ಮನೆ |
ಪೊರೆಗೆ ನಡೆಯಿರಿ ನಿಲ್ಲುದೇಕೆನೆ |
ಮರಳಿ ಬಂದೀ ವಾರ್ತೆ ಬಿತ್ತರಿಸಿದರುಮೊಡೆಯನಿಗೆ ||೨೩||

ಆವೊಡಾಗಲಿ ಪಾಸಿ ಕೊಳ್ಳುವ ।
ವೋದದಾ ಜಮುಖಾನೆ ಮೆತ್ತನಿ ।
ಷೇಧಿಸದ ಕವುಳುಡೆಯುು ತೋರ ನಿಶಾರವುಂ ಕೊಂಡು ॥
ಓವನ ತಯಾರಿಸುತೆ ಬಹು ಮ ।
ರ್ಯಾದೆಯಿಂ ಬರ ಹೇಳಿ ಕಳುಪಿದ ।
ನಾವೊಡಾತಂ ಬರದೆ ಮನೆಯೊಳಗಿಲ್ಲವಿವುಯೆಂದ ॥ ೨೪ ॥

ಆಜುಗುತಿಕಂ ಗೃಹಕೆ ತಾನೇ ।
ಸ್ವೈಜನುಂ ತಿಳಿಯಲಿಕೆ ಪೋಲಿಸ ।
ಫೌಜನುಂ ಕರೆವೊಯ್ದು ಬಾಯಿಗೆ ಬಂದುದಂ ಬೈಯ್ದು ॥
ಆಜನುವ ಗೌಡಕಿಯ ಕಳೆವೆಂ ।
ವೋಜೆಯಿಂ ಮಾತಾಡಿ ಗೌಡರ ।
ನಾಜುಕವ ಕರ ಪಿಡಿವೆಳೆದು ತಾಂ ತಂದ ಚಾವಡಿಗೆ ॥ ೨೫ ॥

ಪೇಳಿ ಕಳುಪಿದೊಡೇಕೆ ನೀನಿಂ ।
ಡೋಲೆಕಾರಗೆ ತೆಗಳಿ ಕಳುಪಿದೆ ।
ಗಾಳಿ ಬಿಡಿಪೆನು ನಿನ್ನ ಮೈಯ್ಯೊಳಗಿನದು ನೋಡೆಂದು ॥
ಕಾಲು ಕರವುಂ ಬಿಗಿಸಿ ಕಂಭಕೆ ।
ರೂಲ ಕಟಗಿಯಲಿಂದೆ ಬಲು ಬಾ ।
ಸಾಳು ಮೂಡುವ ಹಾಂಗೆ ಬಡಿದನುನೌಡುಮುಂ ಕಚ್ಚಿ ॥ ೨೬ ॥

ನಿನಗೆ ಸರಕಾರದವರೆಚ್ಚರ ।
ವಿನಿತಿನಿತು ತಾನಿಲ್ಲ ಬಿಂಕದ ।
ಬಿನುಗು ನುಡಿಯುಂ ನುಡಿದು ಜನರಿಗೆ ತತ್ತಳಂಗೊಟ್ಟು ॥
ಅಣಿಯುರವೆ ಪಿರಿತನಕೆ ನಿಂತಿ ।
ಪ್ಪೆನುತವುರಿವೋಲಾಗಿ ಕಶೆಯಿಂ ।
ಹಣಿದ ಸುತ್ತಲು ರುಧಿರ ಚಿಲಿಚಿಲಿ ಸಿಡಿದು ಬೀಳ್ವಂತೆ ॥ ೨೭ ॥

ಮೂರು ಘಂಟೆಯ ಕಾಲ ಬಡಿದು ವಿ ।
ಚಾರಮಂ ಮರುಮಾಡಿ ಕಂಭಕೆ ।
ನೇರ ನಿಂತಿಹ ಪೆಗ್ಗಡೆಯನಂ ಬಿಚ್ಚಿಯಾಮೇಲೆ ॥
ಈರ್ದು ನಿಲ್ಲಿಸುತಿನ್ನು ಮುಂದಂ ।
ಕೀರುತಿಯು ಬಪ್ಪಂತೆ ನಡೆಯೆಂ ।
ದೂರು ಬಿಟ್ಟವಗಮಿಸಿದಂ ಪೋಲೀಸರೊಡಗೂಡಿ ॥ ೩೮

ಇತ್ತ ಗೌಡನು ಬಡತಮಂ ತಿಂ ।
ದತ್ತು ಕರೆದು ತುಟಾರ ಫಲಮಂ ॥
ಪೊತ್ತು ಮೊಟ್ಟೆಯ ಬೇನೆಯುಂ ತಾ ಹತ್ತಿಯಸುತೋರಿದ ॥
ಉತ್ತಮಾರ್ಯರು ನುಡಿದನುಡಿಯಂ ।
ಮಿಥ್ಯೆ ಮಾಡಲದಾವನಿರುವಂ ।
ತಥ್ಯವಾಗೀಯಾಸ್ತಿ ಸಿದ್ಧನ ಗೌಡನಿಂಗಾಯ್ತು ॥ ೩೯

ಭಾರತದಿ ನರ್ಮದೆಯಲಿಂ ಕಾ ।
ವೇರಿ ವರಗಿನ ಮಧ್ಯ ಸ್ಥಳಮಂ ।
ಸೂರಿಗಳು ಬಹು ಪುಣ್ಯ ತಾಣಂತೆಂದು ಪೊಗಳಿಹರು ॥
ಆರಯದುಮಿಾಸ್ಥಲದಿ ನಮ್ಮನು ।
ಹಾರಯಸಿ ಬರಸಿರ್ಪ ದೇವನೆ ।
ಚಾರತರ ತವ ಪಾದತಲಮಂ ಪೊತ್ತು ನಾಂ ಪಾಡ್ವೆ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮತ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೧೧ನೇ ಅಧ್ಯಾಯವು ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೩೧೧

# ೧೧ ನೇ ಅಧ್ಯಾಯ

**ಸೂಚನೆ :**

ದುಷ್ಟ ನಕ್ಷತ್ರದೊಳು ಜನಿಸಿದ ।
ರಿಷ್ಟ ಬಾಲಕಿಯುಂ ವಿಲೋಕಿಸಿ ।
ಶಿಷ್ಟಳಾಗಳೆನುತ್ತೊರೆದ ಮುನಿಪಂಗೆ ಶರಣೆಂಬೆ ॥ ಪಲ್ಲ ॥

ಮದುವೆಯಂ ನೆರೆ ಮಾಡಿಕೊಂಡಾ ।
ಮದುಮಗನ ಮುಖಪಂಕಜವನುಂ ।
ಹದುಳಿಗದು ತಾವ್ ನೋಡಿ ಶುಭಮಂ ಕೋರಿಯಾಬಳಿಕ ॥
ಅಧಿಪನಾಗೆಂದುಸುರಿ ಚಿಟುಕೆಯ ।
ನಧಿಕವಾಗಿಯೆ ಮುರಿದು ಕುಲುಕುಲು ।
ಮುದದೊಳಧರದಿ ನಗುವಿವರಿಗುಂ ಸುಖವ ನಿಡು ಶಿವನೆ ॥ ೧ ॥

ಗುಳಗುಳೀಯೆಂಬೂರಿನೊಳಗಂ ।
ಚಲುವ ಭಕ್ತರ ಕಾಣ ಬೇಕೆಂ ।
ದಲಘು ಮತಿ ಗುಡಿಸಾಗರೀಶ್ವರ ಬಂದನೊಂದು ದಿನಂ ॥
ಇಳಿದುಕೊಂಡನು ಹಾಲುಮತದಾ ।
ಹಳಿಯ ಬೀರಪ್ಪೆಂಬನಲಿ ದಿನ ।
ಪಲವು ವೇದಾರ್ಥಂಗಳಂ ಪರುಪಿದನು ತಿಳಿವಂತೆ ॥ ೨ ॥

ಭಕುತರದನಾಲಿಸುತೆ ಯತಿಗಳ ।
ಯುಕುತಿಯುಂ ನೆರೆ ನೋಡಿ ಮನದೊಳು ।
ಚಕಿತರಾಗಿ ವಿಧಾತನಿವನಖಿಲಾಂಕನಿವನೆಂದು ॥
ಸುಕರನಂ ಬಲ್ ಪೊಗಳಿ ಶಿರದೊಳು ।
ಮುಕುಟವುಂ ಸಲೆ ಪಾಕಿ ಗಂಧದ ।
ಬಕುಳವುಂ ಪದಕಿಟ್ಟು ಮಂಗಳವೆತ್ತುತಿಹರೈಸೆ ॥ ೩ ॥

ಮನೆಮನೆಗೆ ಬಿನ್ನಾಯ ದಕ್ಷಿಣೆ ।
ವಿನುತ ಪೇರಡಿ ಪೂಜೆಯುತ್ಸವ ।
ವಿನಯದಿಂ ಪೊರಮಡುವ ಭಕುತರ ಮೇಳವಂ ಕಂಡು ॥
ಪುಸಿತ ಪೊಮ್ಮಿದ ಪೊಂಗಿ ರುದ್ರಸು ।
ಗಣಪದವ ನಿಮಗಿತ್ತು ರಕ್ಷಿಸಿ ।
ಕನವನಿಪ ಸಂಸಾರದಿಂದುದ್ಧರಿಸಲೆಂತೆಂವ ॥೪॥

ಆದರೊಳಗೆ ಸದ್ಭಕ್ತಳಾಗಿಹ ।
ವಿಧವೆಯೋರ್ವಳು ತನ್ನ ಸದನದಿ ।
ಹದುಳದಿಂ ಸ್ವೀಕರಿಸಬೇಕು ಪ್ರಸಾದಮೆಂತೆಂದು ।
ಪವಗಳೆರಡರ ಮೇಲೆ ಬಿದ್ದಾ ।
ಮುದಿತವದುಮೊಡರ್ಚೆ ಯತಿಯ ।
ಸದಯ ಸನ್ಮತಿ ವೇಡಯಸಿ ಪಕ್ವಾನ್ನಮಂ ಮಾಡಿ ॥೫॥

ಅಜ್ಜನಂ ಕರತಂದು ಕೂರ್ಪಿಸಿ ।
ಸಜ್ಜಿತದ ರಸವೊಸರುವಾ ।
ಸಜ್ಜಿಗೆಯ ಪೂರಣವ ತುಂಬಿದ ಪೂರಿ ಘೃತದೊಳಗೆ ॥
ಅಜ್ಜಿದವಲಕ್ಕಿಯನು ನೀಡುತ ।
ಹೆಜ್ಜೆ ಹೆಜ್ಜೆಗು ಮತ್ತೆ ಕೇಳುತ ।
ಮುಜ್ವಲಿಪ ಮನದಿಂದೆಯೂಡಿಸಿ ಕಳುಪಿವಳು ಯತಿಯ ॥೬॥

ಬಳಿಕ ದಕ್ಷಿಣೆಯ ಕುಡಲಿಲ್ಲೆಂ ।
ದಳುಕಿ ಮಗಳಂ ಕರೆದು ಕರದಲಿ ।
ಚಲುವ ಪತ್ತರ ನೋಟನಿಡುವುತಮಜ್ಜನಿಹ ತಳಕೆ ॥
ಕಳುಪಿದಳು ಶಿಶು ಬಂದು ನಿಲ್ಲಲು ।
ಕಳೆಯ ನೋಡಿ ವಿರುತದಿ ಬೇಗೆ ।
ಕಳಿಸು ಬೇಗ ಕುಮಾರಿಯಿವಳಂ ನೋಡಲಾರೆಂದ ॥೭॥

ಮುಂದಿವಳು ಬಾಳ್ವೆಯನು ಮಾಡದೆ ।
ಕುಂದು ತಹಳುಭಯ ಮನೆಗಳಿಗಂ ।
ತಿಂದು ಸಿವಿಸಿವಿ ವಿಕೃತಿಯಂ ಪರಿ ಪೊಂದಿ ವಲ್ಲಭನಂ ॥
ನಿಂದಿಸುತೆ ಕೈಬಿಟ್ಟು ತವರಲಿ ।
ಚಂದವಾಗಿರದದನು ತೊರೆಯುತ ।
ಮಂದಹಾಸದಿಯಲೆಯುತಿಪ್ಪಳು ಸಿತಗಳೆಂದೆನಿಸಿ ॥ ೮ ॥

ಇಂತುಸುರಿ ಧನ ತೆಗೆದುಕೊಳ್ಳದೆ ।
ಪಂತ ಹೀಗಳೆವವಳ ಕಳುಪಿದ ।
ನಂತರಿಸದಲ್ಲಿಂದೆ ಬಂದನು ರೋಣದಾ ಪುರಿಗೆ ॥
ಪಿಂತಿನಿಂದೀ ವಾರ್ತೆಯಾಲಿಸು ।
ತೆಂಥ ಕಾಲದೊಳುಣ್ಮತೆಂಬಾ ।
ಚಿಂತೆಯೊಳೆ ನವೆಯು ತೊಡಗಿದಳಾ ಶಿಶುವಿನಾ ತಾಯಿ. ॥ ೯ ॥

ಕಾಲ ಗತಿಸುತೆ ಬಾಲೆ ಬಲಿಯಲು।
ಶಾಲೆಯಂ ಬಿಡಿಸುತ್ತೆ ಗೃಹದೊಳು ।
ಲೀಲೆಯಿಂದಿರವೇಳ್ಪು ಬಳಿಕಂ ಲಗ್ನಮಂ ಮಾಡಿ ॥
ಪಾಲನೀಂಟಿಸಿದಾಕೆ ಸಂತತ ।
ಬಾಳ ಮತಿಯಂ ಪೇಳಿಯವಳಂ ।
ಕಾಲಹರಣಕ್ಕೆಡೆಗೊಡದೆ ಕಳುಪಿದಳು ಪತಿ ಮನೆಗೆ ॥ ೧೦ ॥

ಬಂದ ಮರುದಿನ ಕಸ ಮುಸುರಿ ತೊಳೆ ।
ಯೆಂದುಸುರ್ದೊಡಲಕ್ಷ್ಯಮಂ ಗೈ ।
ದೆಂದು ನಾನಿದನೆಸಗಿದಾಕೆಲ್ಲೆನುತಮತ್ತೆಯನು ॥
ಒಂದುಳಿಸದಲೆ ತಿಟ್ಟಳಾಕೆಯು ।
ತಿಂದು ಕೂರ್ಪಲು ಬಂದಿಯಾಯೆನೆ ।
ದಂಥೆಯಂ ನಿನ್ನಿಂದೆ ಗೈಯ್ಯಿಸ ಬಂದೆನೆಂಬುತ್ತೆ ॥ ೧೧ ॥

ಅತ್ತೆಯಂ ತಕ್ಕೈಸಿ ಪಿಡಿವುತೆ ।
ನೆತ್ತಿವನೆಗಂ ಜರತೆಯುಂ ಮೇ ।
ಲೆತ್ತ್ಯನಾಮತ ಚಲ್ಲಿ ಬಿಟ್ಟಳು ವನದ ಹಕ್ಕೆಯೊಳು ॥
ಮತ್ತೆ ಕತ್ತನು ಹಿಚುಕುವನಿತರೊ ।
ಳೊತ್ತರದಿ ಜನ ಬಂದುಮುಕುರುತ ।
ಪೊತ್ತೊಗೆದರೀ ಪೊಸಬಳಂ ಪೇಳಿದರು ಬುದ್ಧಿಯನು ॥ ೧೨ ॥

ಹುಚ್ಚುಮುಂಡೆ ವಿನೀತಳಪ್ಪದೆ ।
ಕೆಚ್ಚಿದೆಯಲಿಂ ಪೊಲಬುದಪ್ಪುತೆ ।
ಬೆಚ್ಚರಬಿ ಕಾವಿಡುವವೋಲ್ ಮಾಡಿಟ್ಟೆ ಮುದುಕಿಯನು ॥
ಎಚ್ಚರದಿ ಬಾಳ್ಕೆಯನು ಮಾಡು ವಿ ।
ರಚ್ಚೆಯಂ ಬಿಡು ಸತಿಗೆ ಪತಿಮನೆ ।
ಹೆಚ್ಚಿನಾ ಸ್ವರ್ಗಲ್ಲವೇ ಬಿಡು ನಿನ್ನ ವಯ್ಯಾರ ॥ ೧೩ ॥

ಊರೊಳಿಹ ಸೊಸೆಯರ್ಕಳೆಲ್ಲರು ।
ನೇರಿದೆಯರಾಗುತ್ತೆ ಪತಿಯುಪ ।
ಚಾರನೊಚ್ಚನೆ ಗೈಯ್ಯುದ್ದ ಭೂರಮೆಯಪ್ಪರನುದಿನವು॥
ಆರೆಕಾರಿಗಳೇರುಗಡೆಯಂ ।
ತಾರದಿಹ ನಾರಿಯರು ವಲಯಜಿ ।
ಭೂರಿ ಸೆಗಳೆಯಗೊಂಡು ಸೆಡಕಿಂ ಕೆಡುವರಿದು ಸತ್ಯಂ ॥ ೧೪ ॥

ಕುರುಡ ಗಂಡನ ಪಾದ ಸೇವೆಯ ।
ಪಿರಿದು ಗಾಂಧಾರಿಯರು ಮಾಡುತೆ ।
ಪರಿಕರದಿ ತನ್ನಯನವಂ ಸಹ ಕಟ್ಟಿಕೊಂಡಳಲಾ ॥
ಅರಿತಿದರವಳಿಯಾಗು ದುರ್ದರ್ಶಿಸಿ ।
ಸರಿಸು ನಲ್ಗುಟುಕಂ ಬಿಡು ಶುಭದೊ ।
ಳಿರು ಬೆಮರ್ಸುರಿಸು ಬೆಸಕೆಯ್ ಮಗುಳೆ ನಿನಗಿದು ಲಾಭ ॥ ೧೫ ॥

ಸೀತೆ ದ್ರೌಪದಿಯವರ ವಿಲಗವ ।
ಸೇತಕೇ ನೀನರಿಯದಾದೆ ಪ ।
ರೀತ ಪತಿಯಿಂ ಪತಿಯ ಪ್ರಾಣವ ಪಡೆದು ಸಾವಿತ್ರಿ ॥
ಖ್ಯಾತೆಯಾಗಿ ಸುಪೂಜ್ಯೆನಡೆದಳು ।
ಭೂತಳದಿ ಸುಯಿಧ್ಧಾನಿಯಾದಳು ।
ಕೌತುಕದಿವರ ನಡೆಯನುಂ ನೀಂ ನೋಡಿ ನಡೆ ಮಗಳೆ ॥ ೧೬ ॥

ಹದಿಬದೆಯ ಲಕ್ಷಣವ ಕೇಳ್ದೊಡೆ ।
ಚದುರೆಯರ ಮೈನಡುಗಿ ಜಿಹ್ವೆಯ ।
ತುದಿಯು ಸೇದುತೆ ನಿಲ್ಲುತಿಹರು ಬೆಮರ್ದು ಬೆಬ್ಬರಗಿ ॥
ಒದವಿ ದುಗ್ಗುಡುಚಾಯಿಸುತೆ ತಾಂ ।
ಬದುಕಿದಳು ಸಾಧ್ವಿಯನಸೂಯೆ ಸು ।
ವಿದಿತವಾಯ್ತೀ ಪತಿ ಪದ ಮಹತ್ವತೆಯು ಲೋಕಕ್ಕೆ ॥ ೧೭ ॥

ಕುಟ್ಟಿ ಬೀಸಲಿ ಬೇಕು ರೊಟ್ಟಿಯ ।
ಸುಟ್ಟು ಪಲ್ಲೆ ಪದಾರ್ಥಮಾಡುತೆ ।
ನಟ್ಟಿರುಳು ಜಲ ತರಲಿಕಾದೊಡು ಪೋಗಲೇ ಬೇಕು ॥
ಅಟ್ಟಹಾಸದಿ ಮೆರೆಯಲಿಕೆ ನಾವ್ ।
ಪುಟ್ಟೆ ಬಂದಿಲ್ಲೆಂದು ತಿಳಿಯುತ ।
ಕಟ್ಟಳೆಯಲಿಂ ಪೆಣ್ಣು ಜನ್ಮವ ದುಡಿಸು ನೀ ತಂಗಿ ॥ ೧೮ ॥

ಶ್ರಮಿಸದಾ ಸತಿ ಯಕ್ಷ್ಮಮಂ ಬಲು ।
ಕಮನ ದೇಹದಿ ಪೊಂದಿ ನೆರಳುತೆ ।
ಕಮರಿ ಪೋಗ್ವಳು ಭೋಗ ಸುಖಮಂ ಸ್ವಲ್ಪನುಂಬದಲೇ ॥
ಸುಮನದಿಂ ದುಡಿವವಳು ಲೋಕದಿ ।
ದಮನ ಮಾಳ್ಪವಳಿಂದ್ರಿಯಂಗಳ ।
ನಮರವಾಕೆಗೆ ರೋಗ ರುಜೆಯಿರುತಿಹಳು ನಳನಳಿಸಿ ॥ ೧೯ ॥

ಇಂತು ಪೇಳ್ದೊಡು ವಿಷಯವಮಂ ನೆರೆ ।
ಕುಂತು ಕೇಳಿದಳಾಕೆ ತೆಪ್ಪಗೆ ।
ದಂತವಮಂ ಕಡಿಯುತ್ತೆ ಮಾತಿಗೆ ಮನ್ನಣೆಯನಿಡದೆ ॥
ಅಂತಿವುದ ನಿರ್ಧಾರದೊಳಗಂ ।
ಸಂತಸದಿ ತಾಯ್ವನೆಗಮೆನ್ನಂ ।
ಸಂತಪಿಸದಟ್ಟಿರೆನೆ ಕಳುಪಿದರಾಗ ಶಕಟದೊಳು ॥ ೨೦ ॥

ಮಗಳು ಬಂದುದು ಕಂಡು ಮಾತೆಯು ।
ರಗಳಿಯಾಗಿಯೆ ಬಂದಿಹಳುವಿೂ ।
ಕೆಗೆ ವಿಭಾವನೆಯೇನು ಕುಡು ಬಹುದೆಂದು ದುಃಖಿಸುತ ॥
ತೆಗಳಿ ಬೆಲೆವೆಣ್ಣಾಗಿ ಬಾಳೆಲೆ ।
ಸುಗಮದಿಂ ಪತಿಗೂಡಿರೆನೆ ನೀ ।
ವಿಘಟಿಸಿಲ್ಲಿಗೆ ಬಂದಿರುವೆಯುರಿಹಚ್ಚಲೀ ನಿನ್ನ ॥ ೨೧ ॥

ಸುಮ್ಮನಿರೆ ಬೈಯ್ದಿಂತು ತಾಯಿಯು ।
ಕೆಮ್ಮುಖದ ಶೃಂಗಾರಿ ಮನೆಯೊಳ ।
ಗೊಮ್ಮೆಯುಂ ಕಾಲೂರ್ದು ನಿಲ್ಲದೆ ಖೇಡೊಳಲೆಯುತ್ತೆ ॥
ಇಮ್ಮಿದರ ಸಂಪರ್ಕೊಡರ್ಚುತೆ ।
ಚಮ್ಮಳಿಗೆಯಂ ಮೆಟ್ಟಿ ನಯನಕೆ ।
ರಮ್ಯವಹ ಕನ್ನಡಕವಮಂ ವೆಡ್ಡಯಿಸಿ ಕರವಸ್ತ್ರ ॥ ೨೨ ॥

ಪಿಡಿದು ಕಂಕತ ಹಿಕ್ಕಿ ಕಚವಮಂ ।
ಜಡೆಯು ಬೈತಲಿ ತೆಗೆದು ಭಂಗಾ ।
ರೊಡವೆಯುಡುತೊಡು ರವಿಕೆ ಸೀರೆಯನಿರಿಗೆಯಂ ತೀಡಿ ॥
ಅಡಲದಾರಿಗು ಶೀಕು ಶಾಕದಿ ।
ಭಿಡೆಯದಿಲ್ಲದೆ ಶೌಳಿ ಟೋಳಿಗ ।
ಕಿಡಿಗೆ ಪೇರಣಿ ಗೈಯ್ವಳಹ ಸಿಗ್ರೇಟು ಸೇವಿಸುತೆ ॥ ೨೩ ॥

ಕ್ರಮವನುಳಿದಾಚರಿಪಳೆಂಬುತೆ ।
ಧುಮುಕಿ ಮನೆಯೊಳಗೆಲ್ಲರೊಂದಿನ ।
ಸಮುತಳಿಸಿ ಸಮುಜಾಯಿಸಿದೊಡಂ ಕೇಳದಿರಲಾಗ ॥
ಅಮರ್ಚ್ಚಿ ಕರ ಶಿರ ಪಿಡಿದು ಮುಡಿ ಗಜ ।
ಗಮನಿಯನೆಳಬಡೆದು ಸುದೀರ್ಘದ ।
ಸಮೆಯದ ನವಿನ ಪಾಶದಿಂ ಬಿಗಿಬಿಗಿದು ಕಟ್ಟುತ್ತೆ ॥ ೨೪ ॥

ಗುಣುಕಿನಿಂ ಬೆನ್ನೆಲಬು ಮುರಿವೊಲು ।
ಹಣಿದೊಡಂ ಪಿಟ್ಟೆನ್ನದಿರೆ ಪೆ ।
ರ್ಣಚಿಯಿಂ ಮೊಣಕಾಲ ಕಣ್ಣಿಗೆ ಜಜ್ಜುದಂ ಕಂಡು ॥
ತೆಣರದೆ ಜನರ ಗಣವನೆ ತೆಗಳ ।
ಲನಿವದಿಂದುಲ್ಬುದಕ ಸುರುವಿದೊ ।
ಡನುಚಿತವ ಬಿಡಲಾರೆನೆನೆ ಮುಂಗೋಪಮಂ ತಾಳ್ದು ॥ ೨೫ ॥

ಕಡೆಗೆ ಜಂತೆಗೆ ನೇತು ಪಾಕಿ ನಿ।
ಗಡವನೆ ತೊಡಕಿಸುತೆ ಕರಂಗಳ ।
ಸಡಿಲು ಪಡಿಸದೆ ಬಿಗಿದು ಮೂರ್ದಿನವಲ್ಲಿಯೇ ಬಿಟ್ಟು ॥
ಸೊಡರ ಪಚ್ಚದೆ ನಿಶೆಯೊಳಂ ಪಗ ।
ಲಡಿಗೆಯಂ ಸಹ ಕುಡುದೆ ಕೆಡವಿರೆ ।
ಮಡಿದರುಂ ನಾಂ ಕರ್ದಮಂ ಬಿಡೆನೆನ್ನೆ ಸೈರಿಸದೆ ॥ ೨೬ ॥

ಬರೆಯುನೆಳದರೊಡಲೊಳುಮೆಲ್ಲಕೆ ।
ಚುರುಗುಡುವವುರಿಯಿಂದೆ ತಕ್ಷಣ ।
ಪೊರಗಿದಳು ಪೆಣಪೊಯ್ದು ಪುಗಿದರು ಬಳಿಯ ಪಳ್ಳದೊಳು ॥
ಪರಮ ಗುಡಿಸಾಗರದ ಮುನಿಗಳು ।
ಸುರಿದ ನುಡಿಯಂ ಕೇಳಿದಾ ಜನೆ ।
ವರಿದುಗೊಂಡರವಳಿಯನಂ ಕೊಂಡಾಡಿದರು ಬಿಡದೆ ॥ ೨೭ ॥

ಧನ್ಯನಾತನ ನುಡಿಯನಾಲಿಸಿ ।
ಚನ್ನ ಜಿಜ್ಞಾಸುಗಳು ನಲಿವರು ।
ಬನ್ನಮಂ ನೆರೆ ದಾಂಟಿ ಸುಖಮಂ ಪೊಂದುತಿಹರ್ರೈಸೆ ॥
ಅನ್ಯರನ್ಯಾಯವನೆಸಗದೊಲು ।
ಮನ್ನಣೆಯ ವೇದಾಂತ ತಿಳುಪಿ ವಿ ।
ಭಿನ್ನತೆಯು ಬಾರದೊಲು ಮಾಳ್ಪ ತಪಃ ಪ್ರಭಾವದೊಳು ॥ ೨೮ ॥

ಗುರುವಿನಾ ನಿಜ ಭಕ್ತಿಯಿವನಲಿ ।
ವರ ಸಮಾಧಿ ಶಿವಪ್ಪನವರಲಿ ।
ಮೆರೆವ ವೈರಾಗ್ಯವು ಶಿವಾನಂದರಲಿ ಮಾ ತಾಳ್ಮೆ ॥
ಸಿರಿಯ ರಾಮಪ್ಪನಲಿ ಮತ್ತೆಯು ।
ಕರುಣೆ ರಾಮನ ಗೌಡನಲಿ ಮಿಗೆ ।
ಝರಿವು ರುದ್ರಸ್ವಾಮಿಯಲಿ ಮನೆ ಮಾಡಿಹುದುವೆಂದು ॥ ೨೯ ॥

ಪುಣ್ಯ ಪಾಪದ ಫಲಕೆ ಸಿಲ್ಕುತ
ಬನ್ನಡರಿ ಬಸವಳಿದು ಬಾಯ್ದೆರೆ ।
ವೆನ್ನನಂ ನೀನಪ್ಪುಗೈಯಿದ್ದು ಕಲುಷವಂ ತೊಳೆದು ॥
ಉನ್ನತದ ಸಂದರಿವನಿತ್ತೊಡೆ ।
ಚಿನ್ನದಂಪಣ ರಚಿಸುತದರೊಳು ।
ನಿನ್ನ ಪಾವುಗೆ ನೆರಹಿಯುಕ್ಕೆನ ಮಾಳ್ಪೆ ಪರಮೇಶ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮಠ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೧೧ನೇ ಅಧ್ಯಾಯವು ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೩೪೧

# ೧೨ನೇ ಅಧ್ಯಾಯ

**ಸೂಚನೆ :**

ಗುಳಗುಳೀ ಬೀರಪ್ಪ ಭಕುತನು ।
ಕಲಹಮಂ ಮಿಗೆ ಮಾಡಿ ನಿಳಯದಿ ।
ಪೆಳವನಾದನು ಯತಿಯ ನುಡಿಯಂ ಮೀರ್ದು ಜಗದೊಳಗೆ ॥ ಪಲ್ಲ ॥

ಮೆರೆವ ಬಾಸಿಗ ಧರಿಸದಿಪ್ಪೊಡೆ ।
ಹರಗುಣಿಂಗೆ ಪೊಣರ್ಚಿ ಬಳಿಕಾ ।
ಮರಣಿಗನ ಸಿವಿಕೆಯೊಳು ಕೂರ್ಪಿಸದುದ್ದ ಪೊರುತಿಹರು ॥
ಅರಿತಿದಂ ನಾನು ಪಸೆ ನಿಲ್ದೀ ।
ಪರಿವಿಡಿದು ಸಂಸ್ಕೃತಿ ಬಜಾಯಿಸಿ ।
ಪಿರಿದು ಮಾಳ್ಪೆಂಬುವಗು ಮುದವಿಡು ಬಗ್ಗದೊವಲುಡೆಯ ॥ ೧ ॥

ಪೆಣ್ಣು ಮಕ್ಕಳಕೂಡ ನಿತ್ಯಂ ।
ಚೆನ್ನಿಗನು ಬೀರಪ್ಪ ತೋಟಿಯ ।
ಗಣ್ಯತೆಯನೊಡವೆರ್ದು ಪೇಂಕುಳಿಗೊಳ್ದು ಹೊಡೆಬಡೆದು ॥
ಉಣ್ಣದುಪವಾಸದೊಳು ದೇಹವ ।
ಸಣ್ಣೆಸುತೆ ನೀಳ್ದೊಳುತಲಿರ್ಪನು ।
ಸನ್ನಿಪಾತಕ ಜನರ ಸನ್ನಿಭನಾಗಿಯೂರೊಳಗೆ ॥ ೨ ॥

ದುಡಿಯಲೊಲ್ಲದೆ ತಿಂದು ಸದನದಿ ।
ಗಡದು ನಿದ್ರೆಯ ಪೊಡೆಯುದಕೆ ಪೇ
ರ್ಗಡಚಿ ಮೇಲ್ಕರಿ ಕೋರಿ ಹೊದೆಯುತ ಹೊಡಕಲಂ ಮಾಳ್ಪೆ ॥
ಅಡಿಕಿಯೆಲೆ ತಂಬಾಕು ಮಿಗೆ ಪುಟ ।
ವಿಡಿದು ಬತ್ತಿಯ ಸೇದಿ ವಾರಕೆ ।
ರಡು ವರಹಗಳ ವೆಚ್ಚ ಮಾಡುವೆಯೆಂದು ಸತಿಸುತರು ॥ ೩ ॥

ಮತ್ತೆ ಪೊಲಕೆ ನಡಿಯೆನೆ ಬಿಸಿಲದು ।
ನೆತ್ತಿಯೊಳು ಬಡೆಬಡೆದು ಬಿಸುಪಾ ।
ಗುತ್ತದೆಂಬುವೆ ವಸಥದಿಟ್ಟೊಡೆ ಶೈತ್ಯ ಬಿಡದೆಂದು ॥
ಪೊತ್ತು ಪೊತ್ತಿಗೆಯೂಟವಮಂ ಬಡಿ ।
ಡಿತ್ತು ಚಲಿಸದೆ ಸುಮ್ಮನಿಪ್ಪೊಡೆ ।
ಸ್ತುತ್ಯವೆನಿಸದು ಕೃಷಿಕರಾಮನೆ ತಿಳಿದು ನಡೆಯೆನ್ನೆ ॥ ೪ ॥

ಕುಪಿತನಾದನಿದಕೇಳಿ ಬೀರನು ।
ಲಪನಮಂ ತೆರೆದೊರೆದನವರಿಗೆ ।
ವಪನಗಿಟ್ಟಹ ಕಾಳುಮಂ ಸಹ ಸುರುವಿಯಂಗಡಿಗೆ ॥
ಅಪುಪ ಮೋದಕ ವುಂಡಿ ಮುಂಡಿಗೆ ।
ವಿಪುಲ ವಸ್ತುವ ಕೊಂಡು ತಿಂಬುತ ।
ಮುಪಚಯವ ಮಾಳ್ಪುವಿರಿ ನಿಮಗೇನುಸುರಬೇಕೆಂದು ॥ ೫ ॥

ದಂಡಮಂ ಪಿಡಿಯುತ್ತೆ ಕರದಿಂ ।
ರುಂಡ ಮುಂಡಕೆ ಜಡಿದು ಪೆಣ್ಣಿನ ।
ತಂಡಮಂ ಬಲ್ವಳಿಸಿ ಗೃಹಮಂ ನರಕದೊಲು ಮಾಡಿ ॥
ಅಂಡಲೆದು ಭಯಮಂ ನಡೆಸಿದುದ ।
ಕಂಡು ಸತಿ ಸುತರೆಲ್ಲರುತ್ತಮ ।
ಬಂಡಿಯಂ ಕಟಗೊಂಡು ರೋಣಕೆ ಬಂದರಜ್ಜನಲಿ ॥ ೬ ॥

ಅತ್ತುಮಾ ಕಾಡಿಗನ ನುಡಿಯಂ
ಸತ್ಯನಾ ಮುಂದೆಯು ನಿರೂಪಿಸೆ ।
ಕೃತ್ತಿವಾಸನು ಕೇಳ್ದು ಮಮ್ಮಲ ಮರುಗಿ ಮನದೊಳಗೆ ॥
ಮತ್ತೆ ದೂವಾಳಿಸುತೆ ಗುಳಗುಳಿ ।
ಗಿತ್ತ ಬೀರಪ್ಪನಲಿ ನೆಲಿಸುತ ।
ಮುತ್ತಮೋತ್ತಮ ವಾಕ್ಯ ಚಯಮಂ ತಿಳುಪಿದಾತಂಗೆ ॥ ೭ ॥

ವಿರಸಚಾಳಿಯ ವ್ಯೆಯ್ಯಗಳ್ಳನ ।
ಹರಿದು ತಿಂಬುತ ಸಕಲ ವಿಂದ್ರಿಯ ।
ವರೆಸುವವು ನೆಲಕೊಗೆದು ದುಃಖದರಾಶಿಯಂ ಕುಡುತೆ ॥
ಮರುಳನೀ ವಾರ್ತೆಯನು ತಿಳಿಯದೆ ।
ಮೆರೆವನೀ ಮಾಯಾಪ್ರಪಂಚದಿ ।
ಕೊರೆಯುವನು ಯನು ಬಿಡನು ಮಿೂತನ ತಿಳಿದುಕೋ ಯೆಂದ ॥ ೮ ॥

ಉತ್ತಮಹ ಮನಿ ಜನರ ನಿಂದಿಸಿ ।
ಮತ್ತನಾಗಿಯಧರ್ಮ ಕೋಟಿಯ ।
ಪೊತ್ತು ಸಂಸ್ಕೃತಿ ಜಾಲದೊಳು ಸಿಲ್ಕಿದ ದುರಾತ್ಮಂಗೆ ॥
ಎತ್ತಲಿಂದಲೋ ಮೃತ್ಯು ದೇವತೆ ।
ಗೊತ್ತು ಪಡಿಸದಲ್ಯೆದುತಿವನಂ ।
ಕುತ್ತು ಮಾಡಿಯೇ ನುಂಗುವಳಿದನು ತಿಳಿದುಕೋಯೆಂದ ॥ ೯ ॥

ಪೆದರ್ದು ಬೀರಪ್ಪಾಗಳಜ್ಜಗೆ ।
ಸದಯ ಮೂರ್ತಿಯೆ ನೀನುಸುರಿದಂ ।
ತಿದಿರುವಾದಿಸದೆಲ್ಲರಾಕೂಡಿರುವೆನೆಂತೆಂದು ॥
ಮೃದುಲ ವಚವುಂ ಕೊಟ್ಟು ಬಳಿಕಂ ।
ಪದವ ಪಿಡಿದಾಣೆಯನು ಮಾಡಿದ ।
ನದಕೆ ಯತಿಗಳು ನೋಡು ತಪ್ಪಿದೊಡೆನ್ನ ನಾಲಿಗೆಯು ॥ ೧೦ ॥

ಬಲು ಹರಿತವಿದೆ ಕತ್ತಿಯಂಬೋಲ್ ।
ಸ್ವಲಪು ನೊಣ ತಟ್ಟದೊಡೆ ಹೋಳಾ ।
ಗಲಿಹುದಿದು ತಿಳಿದು ನಡೆ ಸುಖವಾಗುವದು ಮುಂದೆ ॥
ತಿಳಿಸಿಯಿದರೊಲು ಮನೆಯರಿಂಗುಂ ।
ನಿಲದರುಪಿಯ್ಯೆತಂದ ರೋಣಕೆ ।
ನಲಿವ ವಿಜಯಶ್ರೀ ವಿದಗ್ಧ ಸುಡಾಳ ಸುಖಸಾರ ॥ ೧೧ ॥

ಇಂತು ಕೆಲದಿನವಾದ ಬಳಿಕಂ ।
ಮುಂತಿನಂತೆ ಕುಚಾಳಿ ಬಿಡದ ।
ತ್ಯಂತ ಸ್ವೇಚ್ಛಾಚರಣೆಯಿಂದಲಿಯಜ್ಞನಾ ನುಡಿಯ ॥
ಮಂತಣವುಮಂ ಮರೆತು ಕಲಹವ ।
ನೆಂತು ಕಾಲದಿ ಬಿಡದೆಸಗುತಿರೆ ।
ಮಂತುಗಹ ಬೀರಪ್ಪಗೊದಗಿತು ಕರ್ಮ ಸಂಕುಳವು ॥ ೧೨ ॥

ಒಂದುದಿನ ಕೋಲೆಯನು ಹಾಯ್ದೀ ।
ದುಂದುಗಾರನು ನೆರಳುತಿರೆ ಮನಿ ।
ಮಂದಿಯೌಷಧ ಕೊಡಿಸಬೇಕೆಂದಜ್ಞನಂ ಪುಡುಕೆ ॥
ಒಂದುಮೂರೊಳು ದೊರೆಯದಿರೆ ಸಂ ।
ಬಂಧಿಗಳಿವನ ಮುದ್ದು ವನೆಗೊ ।
ಯ್ದಂದು ತೋರಿಸೆ ಪುಳವಿವೆಂಬುತೆ ಕಡಿದರಾ ಪಾದ ॥ ೧೩ ॥

ಮರುದಿನವೆ ತಾನೆತ್ತಲಿಂದಲೊ ।
ಯುರೆ ಚಿಕಿತ್ಸಾಲಯಕೆ ಯತಿಪಂ ।
ಭರದಿ ಬಂದು ವಿಲೋಕಿಸುತ ಕಾಲ ಕಡಿಮುದನು ॥
ಪಿರಿದು ಶಿಕ್ಷೆಯುಪಡಿದೆ ಜನ್ಮಾಂ
ತರವು ಮುಡುಬಾಗಿರುವೆ ಲೋಕದಿ ।
ಪಿರಿಯರಾ ಕಟ್ಟೊಡೆದವನಿಗಿದೇ ಫಲವು ನೋಡೆಂದ ॥ ೧೪ ॥

ಇದನರಿದು ಜೀವರ್ಕಳೆಲ್ಲರು ।
ಸದಮಲದೊಳೊಳ್ಪೀಜ ವೇದದ ।
ಪರಮ ವಾಕ್ಯವನರ್ಚಿ ನಡಿದೊಡೆ ಮೂರು ಲೋಕಕ್ಕೆ ।
ದೊರೆಯೆನಿಸಿ ಜೀವನ್ಮುಕುತಿಯಂ ।
ತ್ವರದಿ ಪಡೆಯುತಮೀಪ್ರಪಂಚದಿ ।
ಸರಿ ಬೆಸವನು ಬಿಸುಟ್ಟು ಪೋಪರು ಶಿವನ ಬಳಿಗೆಂದ ॥ ೧೫ ॥

ಇರಲಿದಿಲ್ಲಿಗೆ ಮುಂದೆಯೊಂದಿನ ।
ಪರಮ ಮುನಿ ಬೀರಪ್ಪ ನಾ ಮನಿ ।
ಗುರುವರನು ತಾನಾಗಿ ನಿಲಯದಿ ವಸ್ತಿಯಂ ಮಾಡಿ ॥
ಸರಸದಿಂ ಪರಮಾರ್ಥತತ್ತ್ವವ ।
ನರುಪಿಯಾಮೇಲ್ ಕದಳಿ ಫಲ ಸ ।
ಕ್ಕರೆಯು ಪಾಲುಗಳಿಂದೊಡೆಗಲಿಸಿ ಕುಡಿಯಬೇಕೆಂದು ॥ ೧೭ ॥

ತರಸಿದನು ಮೂಜೀನಸವರೊಳು ।
ಬೆರಳಿನಿಂ ಚಿನಿ ಪಾಲುಮಂ ನೆಲ ।
ಕೆರಚಿ ನೋಡಿದನಿಂಗಿತದು ಬಹು ನೀರಿಹುದೆನುತ್ತೆ ॥
ಕರೆದು ಬೀರಪ್ಪನಿಗೆ ತೋರಿಸಿ ।
ಹರದೆಯರ ಗುಣವಿಂತಿಹುದು ಬೇ ।
ಸರಿಕೆ ಮಾಳ್ಪರು ನಿಲ್ಲಲಾರೆಂತೆಂದು ಪೊರಮಟ್ಟು ॥ ೧೭ ॥

ಪೊರಟುಮೈದನು ಕಾಂಬದೆತ್ತಲೊ ।
ಮರುಗಿ ಮನೆ ಜನರರಸಿದೊಡು ತಾಂ ।
ಭರದೆ ಬೈಲಾದನು ಸುಜನ ಬಿತ್ತರಿಪರಾರವಗೆ ।
ಮರುದಿನ ಮನೆ ನೀರಜೆಯು ಪೇ ।
ರ್ಚರಗಿಯಂ ಪಿಡಿದೈದೆ ಬಂದೀ ।
ಯೊರಗಿದೆಮ್ಮೆಯನೆಬಿಸಿ ರಂಬಿಸಿ ಪಿಂಡ ಬರುತಿರಲು ॥ ೧೮ ॥

ಜಾಡಿಸೊದೆಯಿತು ಪಿಂದೆ ಬಿದ್ದಳು ।
ನಾಡೆ ನೆಗ್ಗಿತು ಬಿದ್ದು ಚರಗೆಯು ।
ಕೂಡಿದವರೆಬ್ಬಿಸುತಮಿದುರಿಗಮಾಕೆಯಂ ನಿಲಿಸೆ ॥
ಕೋಡಿನಿಂ ಕಡೆಹಾಯ್ದು ಘಾಯವ ।
ಮಾಡಿ ಕೆಚ್ಚಲ ಬಳಿಗೆ ಬರೆಯದು ।
ನೋಡಿ ಬಳ್ಕುಗೆಡೆದು ಸುಬಾಲದಿ ಬೀಸಿ ಬಡೆಯಿತಲಾ ॥ ೧೯ ॥

ದಾಳಿಯಂ ನೆರೆ ಪಾಕೆ ಮಹಿಷಿಯ ।
ನಾಳಗೊಳ್ದು ದಬಾಯಿಸಿಕ್ಕೆಡೆ ।
ಯಾಳುಗಳು ಪಿಡಿದೆದರು ದಂಡವನೆತ್ತಿ ತೋರಿಸುತೆ ॥
ಪಾಲು ಪಿಂಡುದಕಂ ಸುಕರದಿಂ ।
ನೀಳ ವೊಲೆಯಂ ಪಿಡಿಯಲವುಗಳು ।
ಖಾಲಿಯಿದ್ದುದು ಕಂಡು ಬೆಬ್ಬರಿಸಿದರು ಮನಿ ಜನರು ॥ ೨೦ ॥

ಮತ್ತಿರಡುಳಿದ ಗೋ ಮಹಿಷಿಗಳ ।
ನೊತ್ತಿ ಧೋಹನಕೆ ಬರೆ ಕೈಕಾಲ್ ।
ಕೆತ್ತುವಂತವುಮೊದೆಯೆ ಮುನ್ನಿನವೋಲು ಕೆಡುಕೆನಿಸಿ ॥
ಗೊತ್ತೆನಿಸದಿದು ಹಸಿಯ ತೃಣಮಂ ।
ಪತ್ತಿಕಾಳಂ ಗೋದಿ ತುಷಮಂ ।
ಪೊತ್ತು ತಂದಿರಿಡುತ್ತೆ ಮುಸುರಿಯ ನೀರನುಂ ಕುಡಿಸಿ ॥ ೨೧ ॥

ಆದೊಡವು ಪಿಂಡದಿರೆ ಯಾರೋ ।
ಬಾಧಕರು ಮೊಡಿಸುತೆ ಮಾಟವ ।
ಬಾಧ ಮಾಡಿದರೆಮ್ಮ ಹೈನವದೆಂದು ಮುನಿಸಿಂದೆ
ಪಾದಿ ಪಾದಿಗು ನಿಂತು ತೆಗಳುತೆ ।
ಬೂದಿಯಂ ಮಂತ್ರಿಸುತೆ ಪಚ್ಚುತ ।
ಮಾದರದಿ ರಮಲಂ ವಿಚಾರಿಸೆ ಸಾಧು ಶಾಪೆಂದು ॥ ೨೨ ॥

ಉಸುರಿದರದಂ ಕೇಳ್ದು ದುಃಖದಿ ।
ಮಿಸುಪನಂ ಸಲೆ ಪುಡುಕಿಯಾತನ ।
ಕುಸುಮ ಸಮ ಪದಕೆರಗಿ ಪಾಲೊಳು ನೀರ ನಿನ್ನಿಂದೆ ॥
ಅಸುವಿರುವನೆಗು ಪಾಕದಿಹೆವೆಂ ।
ದಸಮನೇತ್ರನ ಮುಂದೊರೆಯಲವ ।
ನಸುನಗುತಮುಸುರಿದನು ಲೌಕಿಕ ಜನರ ಸ್ವಾಭಾವ ॥ ೨೩ ॥

ತುಪ್ಪದೊಳು ಡಾಲ್ಡವನು ಕುಸುಬೆಯ ।
ದಪ್ಪವಾದೆಣ್ಣೆಯೊಳು ಖಂಡಿಕ ।
ವಪ್ಪವಾಗದ ತೈಲ ನವನೀತಕ್ಕೆ ಪಿಟ್ಟಿಟ್ಟು ।
ಅಪ್ಪುವಾ ಜೇನ್ ತುಪ್ಪದೊಳಗಂ ।
ಸಪ್ಪೆಯುಳಿದಾಬೆಲ್ಲದಾಣಕ ।
ವುಪ್ಪಿನೋಳುಸುಕೊಗೆದು ಗಳಿಪರು ಧನವ ವಿಕ್ರಯಿಸಿ ॥ ೨೪ ॥

ಪತ್ತು ಮಾತಾಡಿದೊಡದರೊಳಂ ।
ಸತ್ಯಮಾವದ್ದೊಂದಿರದೆ ಮಿಗೆ ।
ಗತ್ತುಗಾರಿಕೆಯಲ್ಲಿ ಕಾಲ ಕ್ಷೇಪಮಂ ಮಾಡಿ ॥
ಸತ್ಯ ಸಂಭಾಷಣೆಯ ನುಡಿಯದೆ ।
ಮಿಥ್ಯೆ ಮಾಯೆ ಬಜಾರದಲಿ ಬಹು ।
ನೃತ್ಯಮಂ ಮಾಳ್ಪತ್ತೆ ಚರಿಪರಭಿಜ್ಞರಂತಾಗಿ ॥ ೨೫ ॥

ಎಲ್ಲೆಡೆಗಿಹುದು ಸುಳ್ಳಿನಾ ಕಂ ।
ತೆಲ್ಲೆಡೆಗೆ ವ್ಯಭಿಚಾರ ವಾರ್ತೆಯು ।
ಮೆಲ್ಲೆಡೆ ವಿಲಾಸಿಗಳು ಕೈಗಡಿಕ ಕುಳ ಕೊಪ್ಪರಿಪ ॥
ಖುಲ್ಲರು ಗೊಣಗರು ಕೊಲೆಗರು ಸಲೆ ।
ಬೆಲ್ಲದಂತಿದಿರಿಂಗೆ ನುಡಿಯುತ ।
ಮಲ್ಲಗಳೆವರು ಪಿಂದೆಯಿವರಿಗೆ ಭಯನದಿಲ್ಲೆಂದ ॥ ೨೬ ॥

ಮನುಜ ಜನ್ಮವು ಬಂದುದೇಕೆಂ ।
ದಿನಿತುಮರಿಯದೆ ಜಗದ ವಿಷಯದ ।
ಮಿನುಕಿಗೆ ಮರುಳ್ಗೊಂಡಹಮುಹಮಿಕೆಯೊಳಹರ್ನಿಶವು ॥
ಉಣುವುಡುವಿಕೆಯುಳಿಪನು ಪೆರ್ಚಿಸು ।
ತನಘನಿತ್ತಿಪವಯುವ ಕೆಮ್ಮನೆ ।
ವನ ಪಶುಗಳೊಲು ಕಳೆದುಕೊಂಡೊಡೆ ಬಂದಪುದೆ ಲಾಭ ॥ ೨೭ ॥

ಆರಿರಲಿ ಭೂವಲಯದೊಳಗಂ ।
ಮಾರರಿಪು ಸುಜ್ಞಾನವಿಲ್ಲದೆ ।
ಸಾರಸುಖಮಂ ಕಾಣಲಾಪರು ಕಲುಷ ಭವದೊಳಗೆ ।
ಆರಯಿಸಿ ಶಠಣಾರ ಬಿಂದದಿ ।
ಸೇರ್ದು ನೋಂಪನಮರ್ಚಿ ತನ್ನವಿ ।
ಚಾರವಂ ಗೈದವಗಭೀಪ್ಸಿತ ಫಲವು ನೋಡೆಂದು ॥ ೨೮ ॥

ಆದೊಡಾಗಲಿ ನೀವು ಮುಂದಂ ।
ಸಾಧು ವರ್ತನದೊಳಗಿರುವುತುಂ ।
ಭೇದ ಮಾಡದೆ ನಡೆದು ಕೊಂಡೊಡೆ ಪಿಂಡುವವು ಬಳಿಕ ॥
ಆದ್ಯ ಹೊಳೆಯಾಲೂರಿನಲ್ಲಿಯ ।
ಸಾಧುವೆಚ್ಚರ ಸ್ವಾಮಿ ಮಠ ಬಳಿ ।
ಕೈದು ರುದ್ರರ ಮಠಕೆ ಮೊಸಲದುಪ್ಪ ಕೊಡಿರೆಂದ ॥ ೨೯ ॥

ಹೇ ದಯಾನಿಧೆ ಪತಿತ ಪಾವನ ।
ಪಾದ ಸೇವಕರಿಂಗೆ ಮೋಕ್ಷವ ।
ಕಾದಿರಿಸು ಕಾಪಿರಿಸು ನಿನಗೇಂ ಭಾರಮಿದುಮಲ್ಲ ॥
ಜಾದು ಮಾಯೆಯ ಬಾಯಿಗಾಹುತಿ ।
ಯಾದುದುಂ ನೆರೆ ನೋಡಿ ಸುಮ್ಮನೆ ।
ಸೈದರೆಲ್ಲರು ಕೂರ್ಪರೇ ಬಿಡಿಸುವರೆ ತ್ವರೆವೆರಸಿ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ ಆಧುನಿಕ ಕವಿವರ್ಯ ಗುಡಿಸಾಗರ ಶ್ರೀಮಠ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೧೨ ನೇ ಅಧ್ಯಾಯ ಮುಗಿದುದು ॥

— ಶುಭಂ —

ಒಟ್ಟು ನುಡಿಗಳು ೩೭೧

# ೧೩ ನೇ ಅಧ್ಯಾಯ

**ಸೂಚನೆ :**

ಚಂದಿರ ಶಿವಾನಂದ ಗುರು ಗದ
ದಿಂದೆ ಬಳಲ್ವುದು ಕಂಡು ಮುನಿ ನರ ।
ಗುಂದದಲಿ ಜಪಗೈಸಿಯುಳಿಸಿದ ಚರಿತೆಯಂ ಬರೆವೆ ॥ ಪಲ್ಲ ॥

ಮಕ್ಕಳಿಲ್ಲೆಂದರಿದು ಪರಮನ ।
ನಕ್ಕರಿಕೆಯಿಂ ಪೂಜಿಸಿದೊಡಂ ।
ತಕ್ಕಣುಗನಂ ಕುಡುವ ಶಕ್ತಿಯುಮಿನಿತು ತಾನಿಲ್ಲ ॥
ಕಕ್ಕಡವನುರಿಸುವದು ಸಿತದಾ ।
ಚಿಕ್ಕ ಕೋರೆಯು ಮೊಸಿಯಿವನಿಂ ।
ಗಿಕ್ಕುವದು ತಪ್ಪೆಂಬುವವರಿಗು ಶಿವನೆ ಕುಡು ಮುದಮಂ ॥ ೧ ॥

ಗದಗಿನ ಶಿವಾನಂದ ಸ್ವಾಮಿಗ ।
ಳುದರದಾ ಸಗಳಿಕೆಯಲಿಂ ಬಳ ।
ಲ್ವುದನರಿತು ಗುಡಿಸಾಗರೇಂದ್ರನು ಭಕುತರಂ ನೆರಪಿ ।
ಅಧಿಕರಿಸಿ ವಚಸಿದನು ಪನ್ನೊಂ ।
ದುದಿನಕಿಪ್ಪತ್ತ್ರೈದು ಕೋಟಿಯು ।
ಮುದದಿ ಜಪವೆಸಗಿದೊಡೆಯುಳಿವರು ಮಾಡಿರೆಂತೆಂದ

ಎಲ್ಲರೊಪ್ಪಿಗೆಯಂ ಕುಡುತೆ ನೀ ।
ವೆಲ್ಲಿ ಪೇಳ್ದೊಡು ಮಾಳ್ಪೆವೆನೆ ಮಿಗೆ ।
ಬಲ್ಲ ಯತಿ ನರಗುಂದ ಪತ್ರಿಯ ವನವನುಂ ತೋರಿ ॥
ಅಲ್ಲಿ ಬಿಲ್ವದ ವೃಕ್ಷ ಸಂಕುಳ ।
ಸಲ್ಲಲಿತದಿಂ ಶೋಭೆಗೊಂಡಿರ ।
ಲಲ್ಲಿಯೇ ಮಾಡಲ್ಕೆ ಕಂಟಕ ಪರಿಯುತಿಹುದೆಂದ ॥ ೨ ॥

ಸುತ್ತಲೀವಾರ್ತೆಯನು ಪರ್ಬಿಸೆ ।
ಪತ್ತು ಸಾಸಿರ ಭಕುತರಾಗಳೆ ।
ಸತ್ತಮನನುಳಿಪುದಕೆ ಪೂಜೆಯ ಗಂಟನುಂ ಪೊತ್ತು ॥
ಹತ್ತಿಕುತೆ ತಮ್ಮುದ್ಯಮಂ ಮನ ।
ವೃತ್ತಿಯಲಿ ಪಳುವಗೆಯನುಳಿಯುತೆ ।
ಜತ್ತಿನಿಂದೈತಂದರಾ ನರಗುಂದ ಗ್ರಾಮಕ್ಕೆ ॥ ೪ ॥

ಸ್ನಾನ ಸಂಧ್ಯಾ ವಂದನೆಗಳಂ ।
ಮೇಣು ವಸ್ತ್ರವನೊಗೆವ ಸೊಬಗಂ ।
ಗೇಣುಮಿರ್ದೊಡು ಕೋವಣವ ಪಿಂಡುವ ವಿಧಾನಗಳ ॥
ಮಾನವತಿಯರು ಸೀರಿ ಕುಪ್ಪಸ ।
ಸಾನುರಾಗದಿ ಪಿಂಡುದಂ ತ ।
ಮ್ಮಾನನವನುಂ ತೊಳೆವ ಕಲೆಯುಂ ಕಂಡುಮಾವೂರ ॥ ೫ ॥

ನಾಗರಿಕರುಂ ನಾಡೆ ಮುನಿಸಿಂ ।
ಕೂಗಿದರೆಲವೊ ಯಾವ ಪಳ್ಳಿಂ ।
ದಾಗಮಿಸಿದಿರಿ ಮಾಳ್ಪುದೇನಿದು ಮನಕೆ ಬಂದಂತೆ ॥
ಕಾಗೆಯಂಬೊಲುಮೊಹಕೆ ಬಳಿಕ ।
ಕಾಗು ಬಿಳಿಯಂಬರಕೆ ಜಲಮಂ ।
ಕೈಗೆಬಂದೊಲು ಬಳಿಸೆ ಪಡುವಲ ಹೊಂಡ ಸಾಲ್ದಪುದೇ ॥ ೬ ॥

ಬೇಸಿಗೆಯೊಳಂ ಸುತ್ತು ನೀರು ಖ ।
ಲಾಸುಮಾಗಗಬೆನಿಸಿರಲು ನಿಮು ।
ಗೇಸು ಪೇಳಲಿಬೇಕಿದೊಂದೂರಿನಲಿ ಸ್ವಲ್ಪಿಹವು ॥
ನಾಶಮಂ ನೆರೆ ಮಾಡಿ ನಡಿದೊಡೆ ।
ಘಾಶಿಯಾಗುತ್ತಿರುವೆವದರಿಂ ।
ತೋಷದಿಂ ಜಲಮಂ ನೆಲವನುಂ ಕುಡುವದಿಲ್ಲೆಂದು

ಗಳಸಿ ಗಳಗಳನೆ ಗಳಗೆಯೊಳಂ ।
ಗುಳಿಯನುಂ ಕಾಯ್ವುದಕಮೊಬ್ಬಾ ।
ಸಲುವ ಕೂಲಿಯ ತಂದು ಮಿಗೆ ಪ್ರತಿಬಂಧಮಂ ಮಾಡಿ ॥
ಘುಳಿಯುತಿರೆ ಗುಡಿಸಾಗರೀಶಗೆ ।
ತಿಳುಪುತೀವಾರ್ತೆಯನು ಕೆಲವರು ।
ತಳುವದಿಲ್ಲದೆ ತಂದರಾತ್ಮೈತರುತೆ ಪಿರಿಯರಿಗೆ ॥ ॥ ೮ ॥

ಪೇಳಿದನು ಪನ್ನೊಂದು ದಿನಮುಂ ।
ಸಾಲುವನಿತುಂ ಜಲವ ಕೈಗಡ ।
ಮೋಲಿಕೊಟ್ಟೊಡೆ ಮುಗಿದ ಮರುದಿನ ಸೈಗರೆವ ಮಳೆಯುಂ ॥
ಬೀಳುವಂತೆಯು ಮಾಡಿ ಕೆರೆಯಂ ।
ಬಾಳ ಜಲದಿಂ ತುಂಬಿ ನಿಮ್ಮಯ ।
ಸಾಲಮಂ ಕೊಟ್ಟಪೆವು ತಪ್ಪದೆ ತಿಳಿಯಿರೆಂತೆಂಬ ॥ ೯ ॥

ಸಾಧುಗಳ ನುಡಿಯಂಗಿಕರಿಸುತೆ ।
ಬಾಧೆಯಂ ಕುಡುತಿರ್ಪುದಂ ಬಿಡೆ ।
ಮೋದದಿಂ ಕಾರ್ಯಕ್ರಮಗಳುಂ ಪ್ರಾರಭವುಮಾಗೆ ॥
ವೇದುರದ ಭಕ್ತರ್ಕಳೆಲ್ಲರು ।
ಮಾದರದಿ ಶಿವಪೂಜೆಯಂ ನಡಿಸಿದರುಮೇವೇಳ್ಪೆ ॥ ೧೦ ॥

ಕರದೊಳಂ ಶಿವಲಿಂಗಮಂ ವರ ।
ಕೊರಳಿನೊಳು ರುದ್ರಾಕ್ಷಿಯಂ ಚೆಲು ।
ಶರಿರಕೆಲ್ಲ ವಿಭೂತಿಯಂ ಮಿಗೆ ಧರಿಸಿಯಾಮೇಲೆ ॥
ಮೆರೆವಲರ್ಸೆನೆ ಧೂಪ ದೀಪವ ।
ಹರುಷದಿಂ ಘಂಟಾ ರವಮುಮಂ ।
ಸರಸದಿಂ ನೈವೇದ್ಯಮಂ ಸಲ್ಲಿಸುತಮರ್ಚಿಸುತೆ ॥ ೧೧ ॥

ಎಳೆಯುತಿಹ ಜಪ ಸರದ ಕಲೆಯಿಂ ।
ಲಲಿತ ಬಾಯೊಳುಪಾಂಶು ಜಪದಿಂ ।
ಬಲಿತ ಪದ್ಮಾಸನವನುಂ ಪಾಕಿರ್ಪ ಸೊಗಸಿಂದೆ ॥
ಬೆಳಗಿನಾ ಜಾವದೊಳೆ ಪೂಜೆಗೆ ।
ಕುಳಿತ ಕೆಲಬರು ಸಂಜೆವನೆಗಂ ।
ಚಲಿಸದಂತರದೃಷ್ಟಿಯಂ ವಿಸ್ತರಿಸಿ ಚಲ್ವೆನಿಸಿ । ॥ ೧೨ ॥

ಪ್ರತಿದಿನವುಮೈದಾರು ಕೋಟಿಯು ।
ಸತತ ಜಪವಂ ಮಾಡೆ ಕಂಡಾ ।
ಹಿತದ ತಳಿಕರು ಹಿಗ್ಗಿ ಪೂಜೆಗೆ ಕುಳಿತ ಜನರೆದುರು ॥
ರುತಿಯ ಖರ್ಜುರ ಕಾಯಿ ಕರ್ಪುರ ।
ವತುಳ ಬಾಳೆಯ ಪಣ್ಣನಿಡುವುತ ।
ನುಡಿಸಿ ವಂದಿಸಿ ಪೋಗುತಿದ್ದರು ತಮ್ಮ ಮನೆಗಳ್ಗೆ ॥ ೧೩ ॥

ಇತ್ತಮಿಪ್ಪತ್ತೈದು ಕೋಟಿಯು ।
ಸ್ತುತ್ಯ ಜಪವುಂ ಮುಗಿಯೆ ಪ್ರಸಭಂ ।
ಸತ್ತಮ ಶಿವಾನಂದರಾ ಜೋಲಿಯೊಳಗೋಂಕಾರ ॥
ಮತ್ತೆಯು ಪೊಳಪುಮುಣ್ಮೆ ಥಣ್ಣನೆ ।
ಯೊತ್ತಿ ಘಂಟೆ ನಿನಾದವಾಗೆ ವಿ ।
ಪತ್ತಿನಿಂ ಪಾರಾದರಹಹಾ ಅಜ್ಜ ಪೇಳ್ದಂತೆ ॥ ೧೪ ॥

ಗುರು ಶಿವಾನಂದಾರ್ಯನೆರ್ದುಂ ।
ಹರುಷಮಂ ಮಿಗೆ ದಾಳ್ದುದಂತವ ।
ನರುಪಿದರು ನರಗುಂದ ಗ್ರಾಮಕೆ ನಾಗನೂರಿಂದ ॥
ಸುರಸದಜ್ಜನುಮಿದನುಮಾಲಿಸಿ ।
ನರರನುಂ ತಾರಿಪ್ಪ ಮೂರ್ತಿಯು ।
ಪರಮ ಪಂಚಾಕ್ಷರಿಯ ಜಪದಿಂದುಳಿದನೆಂಬುತ್ತೆ ॥ ೧೫ ॥

ಬಳಿಗೆ ಕುಳಿತಿಹ ಜನಕಮಾಗಳೆ ।
ಎಲವೊ ಗಳಿಪಿಂ ಕಾಲ ಕಳೆದೊಡೆ ।
ಮೊಲೆದು ಬಪ್ಪಪೆ ಸಾರ ಸುಖವದು ಜಪವ ಮಾಡದಲೆ ॥
ಇಳೆಯೊಳುತ್ಸಿಕ್ತತೆಯ ಮನಮಂ ।
ದಳೆದು ಜನದೋತ್ಸಾದಸ್ಯೆದಲು ।
ಮೆಲಕಿನಾ ಮೇಲ್ ಬಡವನಾ ಯಮ ತಿಳಿಯಿರೆಂತೆಂದ ॥ ೧೬ ॥

ಮಾತು ಮುಗಿದಪವೇನು ತಾನೀ ।
ಭೂತಳದಿ ಕೃತಿ ಮುಗಿದಿಪುವೆ ವರ ।
ನೀತಿಯಂ ಬಲ್ಬಿಸುಟ ಮದಮಂ ಪೊಂದುತಂ ಬಾಳ್ವ ॥
ಏತಕೀ ಕಲ್ಮಷವ ಮಾಳ್ಪಿರಿ ।
ಪೂತ ಜಪವಂ ಮಾಡಿಯುರಿವಂ ।
ಸೈತು ತಿಳಿಯಿರಿ ಬಿಡದೆ ಗುರುಕುಲ ವಾಸಮಂ ಮಾಡಿ ॥ ೧೭ ॥

ಆನುವಾರೀ ಜಗವಿದೇನುಂ ।
ಕಾಣುಹ ತಡಂ ವಿಷಯವಡಗುವ ।
ದೇನು ಮಾಯೆಯೊ ಏನುಮಲ್ಲವೊ ತಿಳಿಯದಿದುಮೆನುತೆ ॥
ಮಾನಸದಿ ತಲ್ಲಣಿಸಿ ತಿಳುಪುವ ।
ಜಾಣರಂ ಪುಡುಕುತ್ತಮಲೆವುದು ।
ಕ್ಷೋಣಿಯೊಳುತ್ತಮವು ಬಿಡುವುದು ಹಾನಿಕರವೆಂದ ॥ ೧೮ ॥

ಕುಡಿವ ತಿಂಬುವ ತೆಗಳ್ವ ತಿಟ್ಟುವ ।
ಕಡಿವ ಕೊಲ್ಲುವ ಮುನಿವ ಕದಿಯುವ ।
ಕೆಡಕನೀವಾಚಾಳಿಯಂ ನೆರೆ ಬಿಟ್ಟು ಸಂತಸದಿ ॥
ಅಡಗೆಡೆದು ಶಿವಶರಣ ವೃಂದಕೆ ।
ವ್ಯಡನಿರವನರಿಯುತ್ತಲಿರ್ದೊಡೆ ।
ಕೊಡೆಯುವೋಲಾಗಿರುವನುಂ ಶಿವ ನರ್ಚಿರೆಂತೆಂದ ॥ ೧೯ ॥

ಸಂತತಂ ಮಾಮಂತ್ರ ಜಪಮಂ ।
ಕುಂತು ಸರಸದಿ ಪತ್ತು ಸಾಸಿರ।
ವಿಂತು ಪ್ರತಿದಿನ ಗೈಯ್ಯೆ ಶಿವ ಸಾಯುಜ್ಯಮಂ ಕುಡುವ ।।
ಸಂತರಾ ನಿಜಮಾರ್ಗವಿಹುದಿದ ।
ನಂತರಿಸದಾಚರಿಪ ಜನಗಳು ।
ಸಂತಮಿರ್ದಪರೆಂದು ಶೃತಿಯುಂ ಪೇಳುತಿಹುದೆಂನ ।। ೨೦ ।।

ಇನಿತುಸುರಿದಾ ಬಳಿಕ ತಳಿಕರಿ ।
ಗಿನಿದು ನುಡಿ ಬಿತ್ತರಿಸಿದಿಂತುಂ ।
ಪನಿಯೊಡೆವುದಿಂದಿರುಳುಮೆರಕಿಲು ಸರಿಪಡಿಸಿರೆಂದು ।।
ಪ್ರಣುತ ಪೂಜೆಗೆ ಬಂದವರಿಗುಂ ।
ಮುನಿಯುಮೊರೆದಂ ನೀವು ನಿಮ್ಮಯ ।
ಜಿನಸು ತೊಯ್ಯದ ಹಾಂಗೆ ರಕ್ಷಿಸಿಕೊಳ್ಳಿರೆಂತೆಂದ ।। ೨೧ ।।

ಅಂದು ಸರ್ವರುಮುಂಡು ಮಲಗಿದ ।
ರೊಂದು ಮಳೆ ಕುರುಪಂ ವಿಲೋಕಿಸ ।
ದಂದರಜ್ಜಗೆ ಹೇಗೆ ಬಪ್ಪುದು ಲಕ್ಷಣವದಿಲ್ಲ ।।
ಎಂದು ನಿಶೆಯೊಳು ಮೂಡೆ ನಿದ್ದಿಯ ।
ಬಂದಿತದು ಬ್ರಾಹ್ಮೀ ಮುಹೂರ್ತದಿ ।
ಸಂದಿಗೊಂದಿ ಘಟಾರ ಕೆರೆಗಳು ತುಂಬಿ ಹರಿವಂತೆ ।। ೨೨ ।।

ಮರಮಳೆಯು ಭೋರೆಂಬ ಶಬ್ದದಿ ।
ಸುರಿಯೆ ಧಾರೆಯುಗಟ್ಟೆ ಧಿಗ್ಗನೆ ।
ವಿರಗು ಮಿಂಚಿರೆ ಸುಯ್ಯನೇ ಸುಳಿಯುತಿಹ ಮಾರುತನು ।।
ಪೊರಗೆಯಿಂತಿರೆ ಘಂಟೆಯೊಂದಕೆ ।
ಭರತಿಯಾಯಿತು ದೊಡ್ಡ ಹೊಂಡವು ।
ಹರುಷಗೊಂಡರು ಸ್ಥಳಿಕರೆಲ್ಲರು ಕೆರೆಯನುಂ ನೋಡಿ ।। ೨೩ ।।

ಇಂಥ ಬೇಸಿಗೆಯೊಳಗೆ ನೀರಂ ।
ಸಂತನೀತನು ವಿತ್ತನೆಂಬುತೆ ।
ಸಂತುಷದೊಳೊಗ್ಗಾಗುತೆಲ್ಲರು ಬಾಗಿ ಕೈಮುಗಿದು ॥
ನಿಂತು ನಿಮ್ಮಯ ಪಾಲ್ಕಿಯುತ್ಸವ ।
ನಿಂತು ಮಾಳ್ಪೆವೆನೆ ಗುಡಿಸಾಗರ ।
ಪಂತನೊಪ್ಪದೆ ರುದ್ರದೇವರ ಮೂರ್ತಿ ಮೆರೆಸೆಂದ ॥ ೨೪ ॥

ಬಳಿಕ ನರಗುಂದವಲಿ ಪೂಜೆಗೆ ।
ಮಿಳಿತರಾದಾ ಭಕ್ತ ವೃಂದವ ।
ಕಳುಪಿ ತಾನುಂ ಪೋದನೆಲ್ಲಿಗೊ ಕೈಗೆ ಸಿಗದಂತೆ ॥
ನಿಳಯ ನಿಳಯದೊಳಿತ್ತ ಜನಮುಂ ।
ಜಲುವ ಗುಡಿಸಾಗರದ ಪ್ರಭುವಿನ ।
ಸಲುವ ವಾಕ್ಸಿದ್ಧಿಯನು ಕೊಂಡಾಡಿದರು ಮನಮುಕ್ಕಿ ॥ ೨೫ ॥

ಸಾಧುವಿನ ಜಿಹ್ವಾಗ್ರದಲಿ ತಾಂ ।
ವೇದುರದ ಸರಸ್ವತಿಯು ಕುಣಿವಳು ।
ಮೇಧ್ಯ ಸುರಗುರು ವಾಸಮುಂ ಮಾಡಿಹನು ಶಿರದೊಳಗೆ ॥
ಐದು ಮೊಗನಿಂ ವಾಕ್ಯ ಸಿದ್ಧಿಯು ।
ಕೈದೆಗೆಯದಾ ರುದ್ರದೇವರ ।
ಪಾದ ವಯದಿಂ ಸಂದರಿವು ನೆಲಸಿಹವು ನಲವೇರ್ದು ॥ ೨೬ ॥

ಮೆರೆವ ಜ್ಯೋತಿರ್ಲಿಂಗಮುಂ ಪ ।
ನ್ನೆರಡು ಬಳಿಕಂ ಜಸದ ಪದಿನೆಂ ।
ಟೆರುವ ಶಕ್ತಿಯ ಪೀಠಮುಂ ಬಹು ತೀರ್ಥಮಂ ಕಂಡು ॥
ಅರುಮೆಯಿಂದೆ ಪವಿತ್ರ ಗಂಗೆಯ ।
ಸರಸತಿ ಯಮುನೆ ತುಂಗಭದ್ರೆಯ ।
ಪರಮ ಸಂಗಮದೊಳಗೆ ಮಿಂದು ವಿರಾಜಿಸುತ್ತಿಹನು ॥ ೨೭ ॥

ರೋಗಿಗಳಿಗಗದಮುಮುಮಿತ್ತೊಡೆ ।
ಪೋಗುತಿರ್ಪುದು ಬೇನೆಯು ವಲಂ ।
ಬೇಗ ಪೆಣ್ಣನು ತಗೆದ ಪಶುಗಳ ಕೊಂಡ ವಾಳ್ತೆಯನು ॥
ಬಾಗಿ ತಿಳುಪಲಿವುಗಳ ಸುಳಿಗಳ ।
ನಾಗ ಕುಳಿತಲ್ಲಿಂದೆ ತಿಳಿಯುತ ।
ಲೋಗರಿಗೆ ವಕ್ಕಣಿಸಿ ಬಿಡುವನುಮುತ್ತಮಧಮತೆಯ ॥ ೨೮ ॥

ಸತ್ಯದಿ ಹರಿಶ್ಚಂದ್ರನೀತಂ ।
ನಿತ್ಯ ಭೋಗದೊಳಿಂದ್ರನೀತಂ ।
ಮತ್ತೆ ತ್ಯಾಗದಿ ಕರ್ಣನಂ ಮೀರಿಪ್ಪ ವೇದಜ್ಞ ॥
ಉತ್ತಮದ ಗುರುವಾದಿವನೊಲುಂ ।
ಪೃಥ್ವಿಯೋಳಾರ್‍ಆರುಮಿಲ್ಲೆಂ ।
ದೊತ್ತಿ ನುಡಿದೊಡೆ ದೋಷಮಂ ನಾವ್ ಕಾಂಬೆವೆಂದಿಹರು ॥ ೨೯ ॥

ಸಕಲ ರಸಮಂ ಜಿಹ್ವೆ ಕವಿತಾ ।
ಸುಖಮುಮಂ ಕವಿರಾಜ ಕುಸುಮದ ।
ನಿಕರದಾ ರಸಮಂ ಭ್ರಮರ ಕುಳ ಸುಧೆಯನಾ ರಸಮಂ ॥
ಅಖಿಳ ಸುರರುಂ ಮೋಕ್ಷ ರಸಮಂ ।
ಕಕುಲತೆಯಲಿಂ ನಾನು ಕುಡಿವೆಂ ।
ಚಕಚಕಿಪ ಪರಶಿವನೆ ನನಗದನಿತ್ತುಮುದ್ಧರಿಸು ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮದ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೧೩ನೇ ಅಧ್ಯಾಯವು ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೪೦೧

# ೧೪ನೇ ಅಧ್ಯಾಯ

ಸೂಚನೆ :

ರೋಣದೊಳು ಗುಡಿಸಾಗರೇಂದ್ರನು ।
ಸಾನುರಾಗದಿ ಗೈಯ್ದ ಲೀಲೆಯ ।
ಮಾನುವೊರೆವೆನ್ ಸಕಲ ಜನಮುಂ ಮುದಪಡಿಪ್ಪುದಕಂ ॥ ಪಲ್ಲ ॥

ಹರಿಯದೊಳು ಹುರಿ ವಿೂಸಿ ತುದಿಯಂ ।
ತಿರುವುತಂ ಗುರು ಪಿರಿಯರಂ ದೂ ।
ರಿಸಿ ಸೀವರಿಸುತ್ತ ವರ ಪೇರ್ಗಡಿಕನೆಂದೆನಿಸಿ ॥
ಹರದೆಯಂ ಕಟ್ಟೈಸಿ ಕಟ್ಟೊಡೆ ।
ದುರಿಯೆ ಕೇಳ್ದೊಡೆಯುಪ್ಪುನುಂಡು ।
ತ್ತರವ ಕುಡುತಿಪ್ಪನ ಸುಧಾರಿಸಿ ಸುಖವ ಕುಡು ಶಿವನೆ ॥ ೧ ॥

ರೋಣದೊಳಗೈಹೊಳಿಯ ಮುದುಕ ।
ಪ್ಪೈನುಗಾರಂ ಯತಿಯ ಪದವುಂ ।
ಸಾನುರಾಗದಿ ನರ್ಚಿ ಸೇವೆಯೊಳಗಿರೆಯೊಂದು ದಿನ ॥
ಕ್ಷೀಣನಾದಾತನ ಸುಪಿತನುಂ ।
ಹೀನ ಮುನಿಸಿಂ ಬಂದುವೆಲವೋ ।
ಬೋನಮುಂ ಕುಡುತಿರ್ಪರೇನಿವರೆಂದು ಬಹು ಜರೆಯೆ ॥ ೨ ॥

ಜರೆವ ನುಡಿಯಂ ಕೇಳ್ದು ತವಸಿಯು ।
ಪಿರಿಯನಂ ಮನೆಗಟ್ಟಿ ಬಡತನ ।
ಪರಿವ ಯೋಚನೆಯಂ ವಿಲೋಕಿಸಿ ನುಡಿದ ಮುದುಕಪಗೆ ।
ಪಿರಿದು ಧನಮುಂ ಕುಡುವೆನಿದರಿಂ ।
ದರಿಷಣವನು ಮಸಾಲಿ ಪುಡಿಯಂ ।
ಭರದಿಕೊಂಡು ಬಜಾರಕಿಡು ನಡೆ ಬಪ್ಪೆ ನಾನೆಂದು ॥ ೩ ॥

ಕೋಲನೂರುತ ಬಂದುಮಾಪಣ ।
ದೊಳುಮಾಸೀನಾಗೆ ಭಕ್ತನ ।
ಪಾಲು ಮಾರಿತು ಲಾಭವಂ ಬಹು ದೊರೆದುದಂ ನೋಡಿ ॥
ಪಾಳು ಮಾಡದೆ ದೊರೆತ ಧನವಂ ।
ಲೀಲೆಯಿಂ ಗೃಹ ಖರ್ಚು ಬೆಳಸದೆ ।
ಕಾಳಜಿ ವಹಿಸೆ ಮುಂದೆ ಬಲ್ಸಿರಿವಂತನಾಗ್ವೆಂದ ॥ ೪ ॥

ಅಂದವಾದೀ ನುಡಿಯನಾಲಿಸಿ ।
ಮುಂದೆಯದರೊಲು ನಡಿಯೆ ಪೇಟೆಯ ।
ಲೊಂದು ಮನೆಯಂ ಪಿಡಿದುಮುಂಗಡಿಯಿಟ್ಟನದರೊಳಗೆ ॥
ಕಂದು ಕುಂದಿ ಬಳಲ್ವ ಭಕ್ತನು ।
ಸಂದ ವರ್ತಕನೆನಿಸಿ ರೋಣದಿ ।
ಮುಂದೆಯಾದ ವರಿಷ್ಠನಾಶೀರ್ವಾದವಂ ಪೊಂದಿ ॥ ೫ ॥

ಬರಬರುತಮೂರೊಳಗುವಿಾತನೆ ।
ಪಿರಿಯನಾದಂ ನಲ್ವರಕೆಯಿಂ ।
ದುರು ವಖಾರಮುನುಂ ದ್ವಿದಶ ಕೂರಿಗೆಯು ಪೊಲಗಳನು ॥
ನೆರಪಿಯೆಂಟಿತ್ತುಂ ಸುವರ್ಣದ ।
ಪರಿಪರಿಯ ವಸ್ತು ಚಯವುಂ ತಂ ।
ದಿರಿಸಿ ಮೆರೆದಂ ಸಮ್ಮುದದಿ ದೇವೇಂದ್ರನಂ ಮರಸಿ ॥ ೬ ॥

ಗುರುವಿನಾ ಬಲವಿರ್ದಡೆಮ್ಮಗೆ ।
ದೊರಕುವದು ಸಂಪತ್ತು ತಾನೇ ।
ಪರಮ ಜಪ ದಿಗ್ದೇಶದಲಿ ಪರ್ಬುವದು ಬೇರ್ವೆರಸಿ ॥
ಮರವೆಯೆಂಬ ಮನಾಯಿಯುಂ ತುಳಿ ।
ದೆರಡಿರದ ನಿಜದರುವಿನೊಳಗಂ ।
ಬೆರೆತು ಪಡೆವೆವುಮತುಳ ತುಷವನಿದಿರಲಿಯಿಲ್ಲಿಂಗೆ ॥ ೭ ॥

ಈತನೊರ್ವ್ವೆಯುಂ ತನ್ನ ಗೇಹದಿ |
ಸಾತಿಶಯ ಸಂಪ್ರೀತಿಯಿಂ ವಿ |
ಖ್ಯಾತ ದೇವಿ ಪುರಾಣವಂ ನಡೆಸಿದನು ಯತಿಯಿಂದೆ ||
ಪೂತ ಮಾನಾಪೆಂದು ಭಕ್ತರು |
ಮಾತುರದಿ ಕೇಳ್ವುದಕೆ ಬರೆ ಗುರು |
ನಾಥ ಬೆಸಸಿದನಾಗವೆಲವೋನಾಳಿನಾ ದಿನದಿ || ೮ ||

ದೇವಿಯೇ ತಾನಿಲ್ಲಿ ಸಾಕ್ಷಾ |
ತೋವಿ ಬಹಳೀ ಕೌತುಕವನುಂ |
ಭಾವಿಸಿಯೆ ಬಂದರಿಯಬೇಕೆನೆ ಕೇಳ್ದ ಶ್ರೋತೃಗಳು||
ಈ ವಿಷಯಮಂ ತಿಳುಪೆ ಗ್ರಾಮದಿ |
ಭಾವುಕರು ಬಲು ಬೀಗಿ ಬಂದುಂ |
ನಾವೆಯಿಂ ಬೀಡಾರದೊಳು ತುಂಬಿದರು ಕಿಕ್ಕಿರಿದು || ೯ ||

ಯತಿಯುಮಾಗಳ್ ಬಂದು ಮಣೆಯಂ |
ಪತಿಕರಿಸಿ ಕೂಡ್ರುತಿರೆ ದೇವಿಯು |
ಕಿತಮದಿಂದೀಬಾಲಕಿಯಳಾಗುತ್ತಮಲ್ಲಿಂಗೆ ||
ಅತಿಜವದೊಳೈತರುತೆಡಬಲದ |
ನುತದ ಸಮೆ ವರ್ತಿಯನು ಚಾಚುತೆ |
ಹಿತದಿ ಕುಳಿತಿರೆ ಕುರುಪಮಾರುಂ ತಿಳಿಯದುದು ನೋಡಿ || ೧೦ ||

ವ್ಯಾಸ ಪೀಠದ ಮೇಲೆ ಕುಳಿತೀ|
ದೋಷರಹಿತಂ ದೇವಿಯಂ ತಾ |
ನಾಪುತೋಷದಿ ತೋರಿಪಂ ಕೈ ಸಯ್ಗೆಯಂ ಮಾಡಿ ||
ಹಾಸಿನಿಂ ಮಾದೇವಿಯೊಕೆನೆ |
ಲೇಸುಮಂ ಕುಡ ಬಂದಿಹಳುಮೆಂ |
ದಾಶಯುವನುಂ ತಿಳುಪಿದೊಡು ಗುರುಶಾಗದಾಯ್ತಾರ್ಗಂ || ೧೧ ||

ಬಂದವರ ಮನಿ ಪೆಣ್ಣಿನಂತೆಯು ।
ಸುಂದರಾಂಗಳು ತೋರೆ ತಿಳಿಯದೆ ।
ಚಂದ ನಭಮಂ ನೋಡುತಿದ್ದರು ಕುಳಿತ ಜನವೆಲ್ಲ ॥
ಅಂದದಿಂ ಮಾದೇವಿಯುಂ ಮೇ ।
ಲಿಂದ ಬರುತಿಹಳೆಂಬುದಿವರಾ ।
ಸಂದ ಯೋಚನೆಯಾಗೆ ತಿಟ್ಟನೆ ಸಾಧುವರನಾಗ ॥ ೧೨ ॥

ಕ್ರೂರ ಮಧುಕೈಟಭರ ಚಿಕ್ಷುರ ।
ಶೂರರಹ ಶುಂಭಾನಿಶುಂಭರ ।
ಸಾರ ಸತ್ವವ ಹೀರಿ ದೇವ್ತರಿಗೆಲ್ಲ ಸಯ್ತಿಟ್ಟು ॥
ದಾರಿ ತಪ್ಪಿದ ನರ ಸಮಾಜಕು ।
ಸ್ವೈರಿಸದೆ ಶಿಕ್ಷೆಯನು ಗೈಯ್ಯುವ ।
ಹೀರ ವಾಹಿನಿ ಕಂಡಿರೆಂದು ಪುರಾಣಮಂ ಮುಗಿಸಿ ॥ ೧೩ ॥

ಮಂಗಳಾರತಿ ಮಾಳ್ಪದರೊಳಂ ।
ತುಂಗದೇವಿಯುಮಡಗಿ ಪೋಗಲ್ ।
ಲಿಂಗಮಯನಂ ಕೇಳ್ದರೆಲ್ಲರು ದೇವಿ ಬಹಳೆಂದು ॥
ಅಂಗವಣೆಯಿಂದೊರೆಯೆ ಜವದಿಂ ।
ದಂಗಯಿಸಿ ದರ್ಶನಕೆ ಬರೆವಾ ।
ತಂಗಿಯೆಲ್ಲಿಹಳಾಕೆಯಂ ತೋರಿಸಿರಿ ನೀವೆಂದು ॥ ೧೪ ॥

ನುಡಿಯೆ ಯತಿವರನಾಗಮೆಲವೋ ।
ಮೃಡನ ರಾಣಿಯು ಬಂದು ಕುಳಿತೊಡು ।
ಪಿಡಿಯದಾದಿರಿ ದೇವಿ ಕುರುಪಂ ಬೇಗ ನಿಮಗಾಗಿ ॥
ಒಡೆದುಸುರಿದೆಂ ಸಯ್ಗ ಮಾಡಿದೆ ।
ಕಡೆವನೆಗು ತಿಳಿಲಿಲ್ಲ ದೀಪದ ।
ಕುಡ್ಡಿಯು ಚಾಚುತಮಿದ್ದವಳೆ ಮಾದೇವಿಯೆಂತೆಂದ ॥ ೧೫ ॥

ಧಿಕ್ಕರಿಸಿ ಭಕ್ತರ್ಕಳೆಲ್ಲರು ।
ಮಕ್ಕಮುಬ್ಬೆಯಚು ನಮತು ಮನೆಯಾ ।
ಪಕ್ಕದೊಳಗಿಹ ಜರತೆ ಕುಡಿ ಚಾಚಿದರುವೆಂದೆನ್ನೆ ॥
ನಕ್ಕುಮಜ್ಜನುವಮಾರುಮಿಲ್ಲಿಗ ।
ಮಕ್ಕರದಿ ಬಂದಿಲ್ಲವೆನೆಯವ ।
ಪ್ರೋಕ್ಕು ಮನೆಯಂ ಕೇಳಲ್ಕೈದ್ದುಂದಿಲ್ಲವೆಂದಿಹರು ॥ ೧೬ ॥

ಆಗ ಜನವುಂ ನಮ್ಮ ಗ್ರಾಮಕೆ ।
ನಾಗಭೂಷಣನಿಳಿದಿಹನುಮೆಂ ।
ದಾಗಮಜ್ಞನಸಾದನುಂ ಪೂಜಿಸುತೆ ನಲಿದಾಡಿ ॥
ಈಗಿನಾ ಕಲಿಯುಗದೊಳೆಲ್ಲೆಡೆ ।
ಸೋಗಿನಾ ಸಾಧುಗಳುಮಿರ್ಪರು ।
ತ್ಯಾಗದವರಿಲ್ಲಜ್ಞನಾಪರಿಯೆಂದು ವಚಿಸಿದರು ॥ ೧೭ ॥

ಬಳಿಕ ಮತ್ತೊಂದು ಬರಿಷ ಶಿವೆಯ ।
ಸಲುವ ಪೌರಾಣವನಿದೇ ಮನೆ ।
ಯೊಳು ಜರುಗಿಸಲಿದಾಲಿಪುದಕಂ ಕೂಡಿದರು ಜನವು ॥
ಉಳುಗಿ ಬಣ್ಣಿಸಿ ದೇವಿಯಂ ಮಾ ।
ಚಲುವ ಸಾಧುಗಳೊರೆಯುತಿರೆಯದ ।
ನಲಸದಾಲಿಸಿ ಪಿರ್ಗುತಿರ್ದರು ಬಂದ ಜನರೆಲ್ಲ ॥ ೧೮ ॥

ಇನ್ನೆರಡು ದಿನದೊಳಗೆ ಮುಗಿಯುವ ।
ದನ್ನರಿತುಮಾದಿನವುಮತಿಶಯ ।
ಚನ್ನ ಭಕ್ತರು ಕೂಡೆ ಬಂದವು ರೆಕ್ಕೆ ಚೇಳುಗಳು ॥
ಧನ್ಯನಿದರಿನ ಗೋಡೆ ಮೇಲೆಯೆ ।
ಕಣ್ಣಿಡುತೆ ನೋಡಿದೊಡುಮಲ್ಲಿಯು ।
ಬೆನ್ನ ಪಿಂದಿನ ಕುಡ್ಯಯೊಳಗಮುಡರ್ಪಡರ್ಪಾಗಿ ॥ ೧೯ ॥

ಸಲೆ ಪುರಾಣದ ಗ್ರಂಥಿ ಮೇಲೆಯು ।
ನೆಲದ ಮೇಲೆಯು ಕೊಂಡಿ ಮೇಲಕೆ ।
ನಿಲಿಸಿ ದುಳುದುಳು ಪರಿದು ಮನೆ ತುಂಬಿದವು ನಿಮಿಷದೊಳು ॥
ಕುಳಿತವರು ಗಾಬರಿಸಿ ಸಿದ್ಧಗೆ ।
ನಿಲದೆ ವೃಶ್ಚಿಕ ನಿಕರವಿರ್ಪುದು ।
ನಿಲಿಸಿರಿಂದು ಪುರಾಣನುಂ ನಾಳಿಂಗೆ ನಡಿಯಲೆನೆ ॥ ೨೦ ॥

ಕೇಳ್ದು ಮಾಹಾಸ್ವಾಮಿ ತಚ್ಛಣ ।
ಪೇಳಿದಂ ನಿಮ್ಮೊಳಗೆ ದೋಷಿಗ ।
ಳಾಳಿಹುದದಾರೆಂದು ಕೇಳ್ದೊಡೆಯೊಬ್ಬಳುಮುದಕ್ಕೆ ॥
ಆಲಿಪುದಕಿಲ್ಲಾಗಮಿಸಿಹಳು ।
ಲೀಲೆಯಾ ಜೋಗಪ್ಪನಂ ಸಹ ।
ಮೂಲದೇವಿಯ ಮರೆತು ಮುದದಿಂ ತೆಗಳಿದವನುಂಟು ॥ ೨೧ ॥

ಆಗಳದರೊಳಗೊಬ್ಬ ನಾರಿಯು ।
ಪೋಗಿ ಬಿಡೆ ವೃಶ್ಚಿಕವುಮರ್ಧವು ।
ನೀಗಿದವು ನೀಂಟಸಿಯೆ ನೋಡಿದೊಡರ್ಧವುಳಿದುಕೊಳೆ ॥
ಬೇಗದಿಂ ಸದ್ಭಕ್ತನೋರ್ವನು ।
ಯೋಗಿಯಂ ಪೊಡಮಟ್ಟು ನಾನೇ ।
ಜೋಗಿಯಂ ರೇಣುಕಿಯನುಂ ನಿಂದಿಸಿದೆನೆಂತೆಂದ ॥ ೨೨ ॥

ನನ್ನ ಅಂಗಡಿ ಮುಂದೆ ನಿಲ್ಲುತ ।
ಕನ್ನ ಬಿರಿವೊಲು ಕನವನಿಪ ದನಿ ।
ಯನ್ನು ಮಾಡುತಮೆಕ್ಕಲಿಗೊ ಜೋಗವ್ವನೆಂದೆನ್ನೆ ॥
ಕಣ್ಣು ಕಿವಿ ಮೈಗಟ್ಟಿಯಿರೆ ತಿರಿ ।
ದುಣ್ಣುವದನುಂ ಕಲಿಸಿದವರಾ ।
ರ್ಪೆಣ್ಣರಿಗುಪಟಳವಿತ್ತು ಮಾತ್ರಕೆ ದೋಷ ಬಿಡುತಿಹುದೆ ॥ ೨೩ ॥

ಕೊರಳಿನಲಿಮಿಗೆ ಕವಡಿ ಸರಮಂ ।
ವರ ಕವುಂಕದಿ ಕಿನ್ನರಿಯನುಂ ।
ಕರದಿ ಬಳೆ ಮೂಗಿನಲಿ ಮೂಗುತಿ ಫಣೆಗೆ ಭಂಡಾರ ॥
ಸಿರಿದು ದೀರ್ಘವೆನಿಪ್ಪ ಜಡೆಯಂ ।
ಕಿರಿ ಗುಳಿಯ ಸರಮಂ ಪದದೊಳಂ।
ಧರಿಸಿ ಮನೆಮನೆ ಭಿಕ್ಷೆಗೈದೊಡೆ ಜೋಗಿಯೆನಬಹುದೇ ॥ ೨೪ ॥

ಗುಡ್ಡದೊಳಗೆಲ್ಲಮ್ಮ ಕುಳಿತೀ ।
ಹೆಡ್ಡರಂ ಕಲೆ ಹಾಕಿ ಜಗಮುನು ।
ಮಡ್ಡ ಹಾದಿಗೆ ಪಚ್ಚಿ ಪೇರಡ್ಡಿಗೆಯು ಪಿಡಿಸುತ್ತೆ ॥
ಬಡ್ಡರಿಗೆ ಬಡಿವಾರಮಂ ಕಲಿ ।
ಸೆಡ್ಡ ಸೀರೆಯನುಡಿಸಿ ಸೀರೆಗೆ ।
ದೊಡ್ಡ ಬೆಲೆಯಂ ಮಾಡಿಸಿದಳೆಂದೊದರಿದೆನುಮೆಂದ ॥ ೨೫ ॥

ಹುಚ್ಚಿನಿಂ ನುಡಿದಿರ್ಪೆ ನೀನೀ
ಗೆಚ್ಚರಿಕೆಯಿಂ ಮುಂದೆ ನಡೆಯಿೂ ।
ಕಿಚ್ಚಿನಾ ಬರ್ದುಂಕಿನೊಳು ನೀಂ ದಾನಮಂ ಮಾಡು ॥
ಹೆಚ್ಚು ಸಂಗ್ರಹಿಸಿಟ್ಟು ಕೊಂಡೊಡೆ ।
ಮೆಚ್ಚನಾ ಪರಮಾತ್ಮ ನಿನ್ನಂ ।
ನುಚ್ಚು ನೂರಂ ಮಾಡ ಹಚ್ಚುವನೆಂದು ಯತಿ ನುಡಿದು ॥ ೨೬ ॥

ಜೋಡುಗಾಯುತ್ತುತ್ತಿಗಳನುಂ ।
ನಾಡೆ ತರಿಸುತೆ ದೇವಿ ಪಾದಕೆ ।
ನೀಡಿಸುತ್ತಂ ಪೂಜೆಯಂ ಮಾಡಿಸಿದನಾ ಬಳಿಕ ॥
ಗೋಡೆಗಡರಿದ ಚೇಳ್ಮುಳ್ಳಿಯೆ ।
ಪೀಡೆಯಂ ಮಾಡದಲಡಗಿಕೊಳೆ ।
ಹಾಡಿ ಹರಸಿದರಲ್ಲಿ ನೆರೆದಾ ಭಕ್ತರದು ನೋಡಿ ॥ ೨೭ ॥

ಎಲ್ಲ ವಿಘ್ನಗಳಳಿಯೆ ಬಳಿಕಂ ।
ಸಲ್ಲಲಿತ ಸದ್ಗುರು ಚರಿತೆಯಂ ।
ಸಲ್ವ ಭಕ್ತರಿಗರುಪಿದಂ ಮನ ಮೆಚ್ಚಿ ತಿಳಿವಂತೆ ॥
ಬೆಲ್ಲದೊಳು ಸವಿ ಹಾಲಿನಲಿ ಹವಿ ।
ಚಲ್ವಜಲದದಿ ಛವಿಯುಮಿರುವೊಲು।
ಬಲ್ಲ ದೇವಿ ಝುಮಡಗಿಹಳುಮೆಲ್ಲದರೊಳಗು ಬಿಡದೆ ॥ ೨೮ ॥

ಪಂಚ ವಿಷಯದ ಮೋಹಮಂ ಬಲು।
ಹಂಚಿಕೆಯಲಿಂದೊತ್ತಿಯಿಂದ್ರಿಯ ।
ಚುಂಚುಮಂ ಮುರಿದಿಕ್ಕಿ ವ್ಯಾಪೃತ ಪರಮ ಸಂಸ್ಥಿತಿಯ॥
ಸಂಚಯಿಸಿ ಸತ್ಯಾತ್ಮಕಳ ಪದ ।
ಸಂಚಿತದಿ ಕಂಡವರು ನೀರವ ।
ಥಂಚಿನೊಳು ನೀರಂಧ್ರರೆಂಧುಂ ಮುಗಿಸಿದನುವಾಗ ॥ ೨೯ ॥

ಗಂಡು ಪೆಣ್ಣುಗಳೆಂಬ ಮೆಯ್ಗಳ ।
ಕಂಡೆರಡೆಣಿಸಿದೊಡಿದು ತಪ್ಪವಿ ।
ಡಂಬ ಪಥವಿದುಮಾತ್ಮವೊಂದಿಹುದವರ ಮಧ್ಯದೊಳು ॥
ತುಂಡಮೈದದಿಹಾ ಸ್ವಯಂಪ್ರಭೆ ।
ಪಿಂಡದೊಳಗಿಹುದೆಂದು ತೋರಿಯ ।
ಖಂಡನಂ ಮಾಡೆನುತೆ ಪದಮಂ ಪಿಡಿವೆ ಪರಮೇಶ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮದ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೧೪ನೇ ಅಧ್ಯಾಯವು ಮುಗಿದುದು ॥

— ಶುಭ : —

## ೧೫ನೇ ಅಧ್ಯಾಯ

**ಸೂಚನೆ :**

ಜಗ್ಗಲದ ನಿಂಗಪ್ಪನಾ ಸುತ ।
ಕುಗ್ಗಿ ರುಜೆಯಿಂ ಬಳಲ್ವುದಂ ಕೇ ।
ಳ್ದಗ್ರಗಂ ಶಿವಯೋಗಿಯುದನುಂ ಕಳೆದುದಂ ಬರೆವೆ ॥ ಪಲ್ಲ ॥

ಪಾಳ ಮನೆಯೊಳಗಿಟ್ಟ ದೀವಿಗೆ ।
ಪೋಲು ಸಾಧುಗಳಪ್ಪರದರಿಂ ।
ಡಾಲಯದಿ ನೆಲೆನಟ್ಟು ಸಾಧುತ್ವವನೆ ನಾಂ ಬಿಟ್ಟು ॥
ಪಾಲು ಬಾನವನುಂಡು ಧವೆಯೊಳು ।
ಕಾಲಮಂ ಸಲೆ ಕಳೆವೆನೆಂಬನ ।
ಗೀಳು ಮೂಳ್ಪದೆ ಸಯ್ತೆಯಿಂ ಸುಜ್ಞಾನ ಕುಡುದೇವ ॥ ೧ ॥

ಕನ್ನಡದ ನಾಡಿನೊಳು ರೋಣವು ।
ಕನ್ನಡಿಯವೊಲು ನಿರ್ಮಳಂ ಬಹು ।
ಮನ್ನ ಚಯುವಕ್ಷೂಣಮಾನದ ಪುಣ್ಯ ಭೂಮಿಯಿದು ॥
ಅನ್ಯೆಯವುಮನ್ವಯಿಸದೆಲ್ಲಕು ।
ಮುನ್ನತಂ ತಾನೆನಿಸಿ ರಾಜಿಪ ।
ಮನ್ನಣೆಯು ಮೇಳೈಸಿ ಮೆರೆವುದು ಸ್ವರ್ಗಮಂ ಮೀರಿ ॥ ೨ ॥

ಇಲ್ಲಿ ಜಗ್ಗಲದವರ ಮನೆಯೊಳು ।
ಬಲ್ಲ ನಿಂಗಪ್ಪೆಂಬ ಭಕ್ತನು ।
ಬಳ್ವಳದಿ ನಡಕೊಳ್ಳುತಿರ್ದನು ಪೂಜ್ಯ ಯತಿಯೊಡನೆ ॥
ಅಲ್ಲವರ್ ಪೇರ್ಗದದಿಮಿಾತನ ।
ಚಲ್ವ ಮಾದೇವಪ್ಪ ನಾಮದ ।
ಸಲ್ಲಲಿತ ಸುತನುಂ ಬಸುವಳಿಯುತಿಹನುಹರ್ನಿಶವು ॥ ೩ ॥

ಜನಕನಿದನು ವಿಲೋಕಿಸುತ್ತಂ ।
ಮನದೊಳಂ ಮರಗುತ್ತ ಮೌಷಧ ।
ವನೆ ಕೊಡಸಿದನುಮುತ್ತಮಗದಂಕಾರರಂ ತರಿಸಿ ॥
ಇನಿತುಮಾದೊಡು ಲೇಸುಮಾಗದೆ ।
ದಿನದಿನವು ಪೆರ್ಜಿನಿಸಿ ವ್ಯತಿಯಂ ।
ಗುಣಿಸುತಾತಂ ಕೆಳಗಿರಿಸಿದಂ ತಲ್ಪಮಂ ಬಿಟ್ಟು ॥ ೪ ॥

ಎಲ್ಲರವನಂ ನೋಡಿಯಳುತಿರೆ ।
ಕೆಲ್ಲಯಿಸಿ ಕೆಲಪಾಯ್ದುಮವರಂ ।
ನಿಲ್ಲದಲ್ಲಿಂ ಸರಿಸಿ ಧಾವಿಸಿ ಬಂದನಜ್ಜನಲಿ ।
ಉಳ್ಳ ಕೇಡಂ ಬಿತ್ತರಿಸಿ ತಾಂ ।
ಬಳ್ಳಿಯಂ ನೀಂ ಬೆರಟದಿರುಮೆಂ ।
ಧುಲ್ಲಿಖಿಸಿದಂ ಮಣಿದು ಗುಡಿಸಾಗರದ ಪುಂಗವಗೆ ॥ ೫ ॥

ಕೇಳ್ದು ಗುರುವರಮೆಲವೊ ನಿಂಗಪ ।
ಗೋಳಮಿಕ್ಕುವ ಮುಂದೆಯಿೂ ಸುತ ।
ಕಾಲವಶಮಂ ಪೊಂದಿ ಪೋಗಲಿ ದುಃಖಿಪುದು ಬೇಡ ॥
ಸಾಲಮಂ ಮಾಳ್ಪವನುಮಿರ್ದುದು ।
ಹಾಳನುಂ ಗೈಯುತ್ತೆ ವಚಮಂ ।
ಪಾಲಿಸದೆ ಕಾಪಿಡದೆ ನಿನ್ನಂ ಕಾಡುತಿಹನೆಂದ ॥ ೬ ॥

ಕೆಟ್ಟ ಮಕ್ಕಳು ಪೊಣ್ಮೆ ತಂದೆಯು ।
ಪೊಟ್ಟೆಯಂ ನೋಡದಲೆ ಕೆಲೆಯುವ ।
ಖೊಟ್ಟಿಗಳು ಸೊಗಮಂ ಕುಡುತಿಹರೆ ಸ್ಥೈರ್ಯಮಂ ಮಾಡಿ ॥
ಬಿಟ್ಟುಬಿಡು ನೀ ಮಕ್ಕಳೀಹೆಯ ।
ಗಟ್ಟಿ ಗುರುಪದ ಪಿಡಿದು ನಿಜನೊಳು ।
ಗಟ್ಟಿಗೊಳೆ ವರ ಮೋಕ್ಷಮಂ ಕಾಂಬುವಿ ಧರಾ ತಳದಿ ॥ ೭ ॥

ಆದೊಡಾಗಲಿ ಸುತನುಳುಹುವಂ ।
ದಾದರಿಸಿ ತಲೆವಾಗಿ ಕೇಳಲ್ ।
ಬೈದು ನನ್ನಿಂದುಳುಹಿಕೊಳ್ಳುವುದು ಸಾಧ್ಯವಿಲ್ಲೆನ್ನೆ ॥
ರೋದನವನುಂ ಮಾಡಿ ನೀನುಂ ।
ಮೇದಿನೀ ಪತಿನಾಲ್ಕುಮುದರದಿ ।
ಕಾದಿರಿಸಿ ರಕ್ಷಿಸುವೆ ರಕ್ಷಿಸು ನನ್ನ ಮಗನೆಂದ ॥ ೮ ॥

ಒಪ್ಪಿ ಸದ್ಗುರು ತನ್ನ ಕರದಿಂ ।
ದಿಪ್ಪ ತೀರ್ಥವನುಂ ಬಳಿಕ್ಕಂ ।
ತುಪ್ಪದಿಂದ ತಯಾರಿಸಿಟ್ಟ ಹಸಾದನುಂ ಕೊಟ್ಟು ॥
ಸೊಪ್ಪದವಗುಣಿಸುಳಿಯುತಿಹನೆಂ ।
ದಪ್ಪನಿಗವುದುಪಿದರಪ್ರತಿಯುಂ ।
ತಪ್ಪದೇ ತ್ರಿಜನಳಿವರೆನೆಯಂತಾಯ್ತು ತಾ ಮುಂದೆ ॥ ೯ ॥

ಇದನು ಲಿಂಗಪ್ಪ ಮನಗಾಣುತ ।
ಪದ ಕಮಲವಂ ಸೇರ್ಚಿ ಪ್ರತಿದಿನ ।
ಸುದತಿ ಸುತರುಂ ಕೂಡಿ ಬೆಸನಂ ಮನದಿ ಮಾಡುತ್ತೆ ॥
ಅದವಳಲುವಂ ಕಳೆದು ಜೀವರ ।
ಹೃದಯ ಪೆಂಕುಳಿಯಂ ನಿವಾರಿಸಿ ।
ತುದಿಗೆ ಬ್ರಹ್ಮಜ್ಞಾನವಿತ್ತಪೆಯೆಂದು ಪೊಗಳಿದರು ॥ ೧೦ ॥

ಒಮ್ಮೆ ಗುಡಿಸಾಗರದ ಧೀಶಂ ।
ರಮ್ಯದಿಂ ಸದ್ಬೋಧ ನಡಿಸಿಯ ।
ಗಮ್ಯವಹ ಪರಮಾರ್ಥವಂ ತಿಳುಪಿದನು ಭಕುತರಿಗೆ ॥
ಬೊಮ್ಮವೇ ನಾವೆಂಬ ವಚನಂ ।
ನೆಮ್ಮಿ ನಿಂದೊಡೆ ಮುಕ್ತಿಯಲ್ಲದೆ ।
ಹಮ್ಮಿನಾ ಜೀವಾತ್ಮನೆಂದಡೆ ನರಕವದುವೆಂದು ॥ ೧೧ ॥

ನಿನಗು ಪೆಂಡತಿಯಾರು ನಿನ್ನಯ ।
ತನುಜನಾವನು ತೊಟ್ಟ ತನುವಿಗು ।
ನಿನಗದಾವುದು ವಿಹುದು ಸಂಯೋಗಾದಿ ಸಂಬಂಧ ॥
ಘನವನ್ನೈದೀವ್ಯೋಹಮಂ ತೊರೆ ।
ದನುಚಿತದ ಭವ ವಲ್ಲರೀಯಂ ।
ಕನಲಿ ಕುಯ್ದು ಪರಾತ್ಮನಂ ಮಿಗೆಯರಿಯ ಬೇಕೆಂದು ॥ ೧ ॥

ಜಲಧಿಯೊಳು ಬಲ್ಸರಿಯು ವ್ಯರ್ಥಂ ।
ನಲಿ ಉಮುಂಡವಗೂಟ ವ್ಯರ್ಥಂ ।
ಬಲಿತ ಸಿರಿಯಿಂದಿರ್ದನರರಿಗೆ ದಾನಮುಂ ವ್ಯರ್ಥಂ ॥
ಪೊಳೆವ ದೀಪವು ಪಗಲು ವ್ಯರ್ಥಂ ।
ಸುಲಭ ಸುಖ ತಾನಿರ್ದೊಡದನುಂ ।
ಕಳೆದು ವಿಷಯದ ಕಪಟ ಸುಖಮಂ ನೆರ್ಜೆ ವ್ಯರ್ಥಂದು ॥ ೧೩ ॥

ಅಣ್ಣು ಪುಲಿವೋಲಿಹುದು ಜರೆಯುಂ ।
ಹಣ್ಣುಹಣ್ಣಂ ಮಾಳ್ಪ ರುಜೆಯುಂ ।
ಬೆನ್ನೆಲಬುಮಂ ಮುರಿವ ಷಡ್ರಿಪು ಕುಳಿತಿಹವುಮೊಳಗೆ ॥
ಭಿನ್ನ ಘಟದೊಳಗಿಪ್ಪ ಸುಜಲಂ ।
ಸಣ್ಣಸಣ್ಣಗೆ ಕಡಲಿಡುವವೊಲು ।
ನನ್ನಿಯಿಂ ವಯ ಲಯವುಮಾಪೊಡಿದನು ಮರೆವಿರೆಂದು ॥ ೧೪ ॥

ಮೊದಲೆ ಮರ್ಕಟಮುದಕೆ ಸುರೆಯಂ ।
ಮುದದಿಯೊಂಟಿಸಿ ಮೇಲೆ ಚೇಳನು ।
ಪದಕೆ ಪದಪಿಂ ಕಡಿಸಿ ದತ್ತುರಿ ಬೀಜಮಂ ತಿನಿಸಿ ॥
ಅದುಕುಳಿಯಲಿಂ ಭೂತನೊಂದಂ ।
ಪದುಳದಿಂ ಬಡಿಸಿದೊಡೆ ಪುರ್ಚವ ।
ದಧಿಕೆನಿಸಿ ಸಾಯ್ವಂತೆ ಜೀವನು ಸಾಯುತಿಹನೆಂದು ॥ ೧೫ ॥

ಇತ್ತ ಗುಡಿಸಾಗರ ವಿಶಾರದ ।
ನ್ಯತ್ಯಧಿಕ ವೇದಾಂತವುಂ ಸಲೆ ।
ವೃತ್ತಿಯಂ ಬಿಗಿದಿಟ್ಟ ಜನರಿಗೆ ಪೇಳ್ವ ವೆಗ್ಗಳಿಸಿ ॥
ಕ್ಷತ್ತ್ರಗವನುಂ ದಾಂಟುವೊಡೆ ಮಿಗೆ ।
ಚಿತ್ತಮಂ ವೆಂಟಣಿಪ ಮಾಯೆಯು ।
ತೊತ್ತನಿಸದವನೇ ಗಭೀರನು ತ್ರಿಜಗದೊಳಗೆಂದು ॥ ೮ ॥

ವಿಷಯಲಂಪಟರಾದ ಜನವುಂ ।
ವ್ಯಸನವೋಳ್ ಕದಕದನೆ ಕುದಿಯುತ।
ಹಸನವಾದಾ ಬ್ರಹ್ಮದಿವವಂ ಮರೆತುಮಲೆಯುತ್ತೆ ॥
ಮುಸುಡಿಯೋ ಮೇಲೆಮ್ಮದೆನುತಂ ।
ಕಸದಕಿಂ ಕಡೆಯಾಗಿಯಿರ್ದೊಡು ।
ಮುಸುರಿಯಂ ದಿನಮೆಲೆಯುತಿರ್ದೊಡು ಬಿಂಕ ಬಿಡಿರೆಂದು ॥ ೯ ॥

ಜಾಣಜಾಣಗೆ ಮೂರು ಬಟ್ಟೆಯು ।
ಜಾಣಕೋಣಗವೆರಡು ಕೋಣಗೆ ।
ಕೋಣವೆದರಿಡೆಯೊಂದು ಬಟ್ಟೆಯು ಜಗದಿ ಬಿದ್ದಿಪವು ॥
ಆಣಕರುಮಿದನರಿಯಲಾಪರು ।
ಕೋಣನಂತೊಂದು ಪಥಮಂ ಸು ।
ಸ್ವಾನುಕೂಲ್ಯದಿ ಪಡೆದೊಡದುಮೇ ಕಲಹ ನೋಡೆಂದು ॥ ೧೦ ।

ದುಃಖ ನಿಜಯವು ಬಾರದೊಲು ತಾಂ ।
ತಕ್ಕುಪಾಯವ ಮೊದಲೆ ಗೈದಡೆ ।
ಸಿಕ್ಕುತಿಪ್ಪುದುಮುವಗೆ ಪಾವನ ವಿಪುಲ ಪೀಯೂಷ ॥
ಗಕ್ಕನೇ ಗಡ್ಡಕ್ಕೆ ಬೆಂಕಿಯು ।
ತಕ್ಕಯಿಸೆ ತೋಡುವದು ಭಾವಿಯ ।
ತಕ್ಕದಾಗದುಮಿದನು ಗುರುವಿಂದರಿಯ ಬೇಕೆಂದು ॥ ೧೧ ॥

ಇರಲಿದಿಲ್ಲಿಗೆ ಮುಂದೆ ಮೂರ್ತಿಯ ।
ಸರಸದಿಂದಂ ಪೊಡೆಯೆ ಬಳಿಕಂ ।
ಪರಮ ಭಕ್ತರು ತಾವೆ ತಾಪಣೆ ಗೈಯ್ಯುವದಂ ಮಾಡಿ ॥
ಅರಿದುಮೊಳ್ಳೆ ಮುಹೂರ್ತಮಂ ತಾವ್ ।
ತರಿಸಿದಾ ವಡವೆಗಳ ಚಯದಿಂ ।
ದರವರಿಸಿ ಗದ್ದುಗೆಯುಗೊಳಿಸಿದರಾಗಮೇವೇಳ್ವೆ ॥ ೧೨ ॥

ದೇವಿ ದೃಷ್ಟಿಯು ಕೆಳಗೆಯಾದುದ ।
ನಾವನಾವನುಮರಿಯಲಿಲ್ಲವು ।
ಭಾವುಕರು ಸರಿಯಾಯ್ತುಮೆಂದೌತ್ಸುಕ್ಯಮಂ ಪೊಂದಿ ॥
ಓವಿ ತಾವಿರೆ ಗ್ರಾಮಕ್ಕೈದಾ ।
ಕಾವುಗೊಂಡ ಮಳಿಯಪ ಬಂದುಂ ।
ಸಾವರಿಸಿ ನೋಡಿದನು ಕೆಳಮುಖ ದೃಷ್ಟಿಯಿದ್ದುದನು ॥ ೧೩ ॥

ಆಗ ತಿದ್ದಿಸುತಿದಿರುನಿಲೆಯನು ।
ರಾಗದಿಂ ನೋಡಿದನು ಮೂರ್ತಿಯ ।
ಬೇಗ ಕಾರ್ಯವ ಮುಗಿಸಿ ನಿಂತನುಮಲ್ಲಿಯಾ ದಿನವು ॥
ದಾಘವಡರಿತು ವಿಷಮ ಜ್ವರದಿಂ ।
ನೀಗದಾಯಿತು ವೈದ್ಯ ಜನಕಂ ।
ಬೇಗೆಯಿಂದಸುನೀಗಿದಂ ಮೂರ್ದಿನಕೆ ಮಳಿಯಪ್ಪ ॥ ೧೪ ॥

ಮುನಿಯು ನುಡಿದುದು ಸತ್ಯವಾಯಿತು ।
ಮನುಭವವು ತಾನಾಯ್ತು ಜನಕಂ ।
ದಿನಮಣಿಯು ಕಳ್ತಳೆಯ ಕಳೆವೊಲು ಮಾಯೆ ಕಳೆವುದಕಂ ॥
ಜನಿಸಿ ಬಂದಿಪನೆಂದುಮಿಾತನ ।
ಘನತೆಯಂ ಬಣ್ಣಿಸುತೆ ಮುದದಿಂ ।
ಕುಣಿಯುತಿಪ್ಪರು ಬೇಗು ಬೆಳಗುಂ ಹರ್ಷಮಂ ತಾಳ್ದು ॥ ೧೫ ॥

# ೧೬ ನೇ ಅಧ್ಯಾಯ

ಸೂಚನೆ :

ಹೊಳೆಯ ಮಣ್ಣೂರೊಳಗೆ ಡೋಣದ ।
ಮಳಿಯಪನು ದುರ್ಗಾಂಬೆ ಮೂರ್ತಿಯ ।
ನೊಲೆದು ಪೊಡೆಯಲು ತಿಳುಪಿದಂ ಗುರುಸಿದ್ಧನದರಿರವ ॥ ಪಲ್ಲ ॥

ಈಗಿನಾ ಮಾಸ್ವಾಮಿ ಮುನಿಗಳು ।
ಸೋಗಿನವರಿಪ್ಪರುಮುಡಾಳರು ॥
ಲಾಗ ಪಾಕುವರಬಲೆಯರ ಬಳಿ ಕಚ್ಚಿ ಬಿಗಿಯಿಲ್ಲ॥
ಆಗತಿಯನಿಚ್ಛಿಸದೆ ಭಕ್ತರ ।
ಬಾಗಿಲವ ಕಾಯುತೆ ಪರಾನ್ನಕೆ ।
ಗೋಗರೆವರೆಂಬವಗು ಮುದಮುಂ ಕುಡು ಪರಾಂಬೆವರ ॥ ೧ ॥

ಹೊಳೆಯ ಮಣ್ಣೂರಿನಲಿ ಭಕ್ತರ ।
ಕುಳವುಮೊಂದಿನವಂಗವಿಸಿ ಮಾ ।
ಚಲುವ ದುರ್ಗಾಮೂರ್ತಿಯಂ ಪೊಡಿಸಿರಿಸಬೇಕೆಂದು ॥
ತಲೆಗೆ ನೂರಾವೊಂದು ರೂಪ್ಯಕ ।
ಸಲಿಸುವೊಡೆ ಸುಗುಮುಪ್ಪುದೆಂಬೀ ।
ಸಲೆ ನಿರೂಪಣೆಗೈದು ಪಣಮುಂ ಕೂಡಿಸಿದರಂದು ॥ ೨ ॥

ಬಳಿಕ ಮೂರ್ತಿಯ ಪೊಡೆಯುವವರುಂ
ತಳುವದಿಲ್ಲದೆ ಬಂದು ಪೊಂದಿಸಿ ।
ಕೊಳಲಿ ಬೇಕೆಂತೆಂದು ಪತ್ರಿಕೆಯಿಂದೆ ತಿಳುಪಿದರು ॥
ಸಲುವ ಡೋಣದ ಮಳಿಯಪ ಬಡಿಗ ।
ರಲಿ ಸುಜಾಣಂ ಪೋಗಿ ಪೊಂದಿಸಿ ।
ಕೊಳೆ ವಿಚಾರಿಸಿ ಬರುವ ದಿನಮುಂ ತಿಳುಪಿ ಮರಳಿದನು ॥ ೩ ॥

ಮುಂದೆ ರೋಣಕೆ ಬಂದುಮಜ್ಜಗ ।
ಮಂದು ತಿಳುಪಿದನೀ ಸುವಾರ್ತೆಯ ।
ವಂದ್ಯನಾಲಿಸಿ ಪೊಡೆಯವೇಡದು ಕೆಡಕಿಹುದು ನಿನಗೆ ॥
ಎಂದುಮಾತನುಮೊರೆಯೆ ಪೆಳ್ವಳ ।
ದಿಂದೆ ಮಳಿಯಪ್ಪಾಗಳಜ್ಜಗೆ ।
ನಂದಿನಾಥನೆ ಮಾತು ಕೊಟ್ಟದೆ ಪೊಡೆಯಬೇಕೆಂದ ॥ ೪ ॥

ಆದೊಡಾಗಲಿ ಸಾದರದಿ ನೀ ।
ನಾದಿಕಾರಣಳಿದೆಯ ಮೇಲೆಯೆ ।
ಸಾಧಿಸಿ ಕುಳಿತು ಪೊಡೆಯವೇಡವು ಮುಂದೆ ತಾಪಿಸುವ ॥
ಮೋದದೋಳೆದುರಿಂಗೆ ನಿಲೆ ಮಾ ।
ಬಾಧೆಯಂ ಪೊಂದುತ್ತ ವಿಪರ್ಯಯ ।
ನಾದರವ ಮಾಡಿದಡೆ ಮರಣಂ ಮೂರು ದಿನಕೆಂದ ॥ ೫ ॥

ಮತ್ತೆ ಸ್ಥಾಪನೆಗೈವ ಮೂರ್ತಿಯ ।
ನಿತ್ಯ ಕೆಳದೃಷ್ಟಿಯದುಮಿದ್ದೊಡೆ ।
ಸತ್ತು ಪೋಗುವ ಪೊಡೆದ ಪುರುಷನು ಮೇಲೆ ದೃಷ್ಟಿಯಿರೆ ॥
ಮೃತ್ಯುಮುಮೈದುವ ಪೊಡಸಿದವ ।
ನಿತ್ತ ಸೀದಾ ದೃಷ್ಟಿಯಿದ್ದೊಡ ।
ಮತ್ತಲಗವದುಮಾರಿಗಿಲ್ಲವು ತಿಳಿದು ನಡೆಯೆಂದ ॥ ೬ ॥

ಕಡೆಗೆ ನುಡಿಯಂ ಮೀರ್ದು ಪೇಳದೆ ।
ಪೊಡೆಯಲಿಕ್ಕೆಯುಮೈದನಾಗಳೆ ।
ಗುಡಿಯ ಮುಂಭಾಗದೊಳು ಸೆಲ್ಲೀಕೇರಿ ಶಿಲೆಯಿರಿಸಿ ॥
ಪೊಡೆಯುವದನುಂ ದಿನಮು ನಡಿಸಿದ ।
ಕೆಡಕಿನಾ ಪಡಿಪುಚ್ಚವಿಲ್ಲದೆ ।
ಕಡಪುನುಂ ಮಿಗೆ ತಾಳುತಿರ್ದನಲಸಿಕೆಯಂ ತೊರೆದು ॥ ೭ ॥

ಪುರುಷ ಸ್ತ್ರೀ ಪಶು ಪಕ್ಷಿ ನಯನದಿ ।
ಹರಳು ಬಿದ್ದರೆ ತಗೆವ ವಿದ್ಯೆಯ ।
ನರಪ್ರವೆನುಮೆಂದೆನುತಮಾಕೆಗಮುರುಷಿಯಾ ದಿನವು ॥
ಕರದಿ ನೇತ್ರವ ಮುಟ್ಟದಡೆಯಾ ।
ಹರಳು ಪೊರಬರುವದನು ತೋರಿಸಿ ।
ಯರಿಯಿದನಿದೇ ನಿನಗೆ ಪತ್ತು ಕೂರಿಗಿ ಪೊಲವು ನೋಡೆಂದ ॥ ೨೪ ॥

ತಿಳುಪಿ ವಿದ್ಯೆ ಸಮಗ್ರಮಂ ಯತಿ ।
ಬಳಿಕ ತನ್ನ ಸಮಕ್ಷಮ ತಗೆಸು ।
ತೊಳಿತೆನಿಸುವದನೀಕ್ಷಿಸುತೆ ಸಂತುಷಮುಮಂ ತಾಳಿ ॥
ತಲೆ ತಲಾಂತರ ನಿನ್ನ ವಂಶದಿ ।
ಕಲಿಸಿದೀವಿದ್ಯೆಯಿದುಳಿಯಲಿ ವಿ ।
ಚಲಿಸದೆಲ್ಲರುಮುರಿದು ಜೀವಿಸಲೆಂದು ಪರಸಿದನು ॥ ೨೫ ॥

ಎನಿತೊ ಜನಕಗದಂಗಳಂ ತಾ ॥
ನೆನಿತೊ ಜನರಿಗೆ ಮಂತ್ರಮಂ ಸಲೆ ।
ಯೆನಿತೊ ಮಾನವ ನಿಕರಕೆಲ್ಲಕೆ ಭಸ್ಮಮಂ ಕೊಟ್ಟು ॥
ಅನಿಬರಿಗುಮುಪದೇಶಮಂ ಬಹು ।
ಮಣಿದುಮುಪಚರಿಪರ್ಗೆ ಸಂಸ್ಕೃತಿ ।
ಕುಣಿಯಲಿಂದುದ್ಧರಿಪನುಭಯ ಕರಂಗಳಂ ಚಾಚಿ ॥ ೨೬ ॥

ಕಬ್ಬಿನಾ ತೋಂಟದೊಳು ಕುರಿಗಳ ।
ನುಬ್ಬಿ ಪೊಡೆದೊಡೆ ಸೋಗೆಯಂ ತಿಂ ।
ದಬ್ಬರದಿ ಪೊರಬರುವವಲ್ಲದೆ ಗಣಿಕೆಯಂ ಮೆಲವು ॥
ಮಬ್ಬಿನಾ ಜೀವರ್ಕಳಿದರೊಲು ।
ರಬ್ಬ ವಿಷಯಂಗಳಿಗೆ ಮೋಹಿಸಿ ।
ಯೊಬ್ಬರರಿಯರುಮಂತರಾತ್ಮನನೆಂದು ನೀಳ್ಕರಿಪ ॥ ೨೭ ॥

ಅನ್ನವರ್ಣಿಸು ಪಚನವಾಗುವ ।
ನಿನ್ನವಳ ಹರೆಯಳಿದ ಬಳಿಕಂ ।
ಬಣ್ಣಿಸುತ್ತಿರು ನುತಿಸು ಕಲಿಯಂ ಬರಲು ರಣದಿಂದೆ ॥
ಎಣ್ಣೆ ಕಾಳಲಸಂದಿ ಜೋಳಗ ।
ಳನ್ನುವರ್ಣಿಸು ಮನೆಗೆ ಬಂದೆಡೆ ।
ಯಿನ್ನು ಗುರುವಂ ನುತಿಸು ತಿಳುಪಿದ ಮೇಲೆಯೆಂತೆಂಬ ॥ ೨೮ ॥

ಸಲೆ ಪುರಾಣದ ಮೇಲ್ ಸ್ಮಶಾನದ ।
ಚಲುವ ಸ್ತ್ರೀಯ ಪ್ರಸುತಿ ಜೆರತೀ ।
ಸುಳಿವ ವೈರಾಗ್ಯಗಳನುಳಿದಾ ಸತ್ಯ ವೈರಾಗ್ಯ ॥
ದಳೆದು ಸಂಪ್ರತಿಪನ್ನ ವಸ್ತುವ ।
ತಿಳಿದು ಮಲಭರಿತಪ್ಪ ಭವಮಂ ।
ತುಳಿದು ಸವುಸವದಿಂದೆ ನಿಂತೊಡೆ ಭಯವದಿಲ್ಲೆಂಬ ॥ ೨೯ ॥

ಜಯಜಯ ಮಹಾದೇವ ಶಂಕರ ।
ಭಯ ನಿವಾರಣ ಭಕ್ತ ಕಿಂಕರ ।
ಸಯದ ಪೆಡಸಂ ನೆರಹು ನಮ್ಮಗೆ ಮಾ ಸುಖಂಕರನೆ ॥
ಅಯನಮಂ ನೆರೆ ತಿಳುಪಿ ಜ್ಞಾನದ ।
ಮಯನೆನೆಗಯಿಸಿ ಬೇಗ ಮಾಯಾ ।
ಶ್ರಯವನುಂ ತಪ್ಪಿಸುತೆರಕ್ಷಿಸು ಭವ ಭಯಂಕರನೆ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ ಆಧುನಿಕ ಕವಿವರ್ಯ ಗುಡಿಸಾಗರ ಶ್ರೀಮಢ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೧೫ ನೇ ಅಧ್ಯಾಯ ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೪೬೧

ಮುಗಿದ ಬಳಿಕಂ ಸರ್ವರುಂ ಕೈ|
ಮುಗಿದು ಮಂಗಲಮಂ ವಿರಚಿಪುದ |
ಕಗಣಿತುತ್ಸವದಿಂದಮೇಳಲ್ ಮಲ್ಲನೆಂಬಾತ ||
ಬಿಗಿದು ಕುಳ್ಳಿರ್ಪುದನು ಕಂಡೀ |
ಸುಗುಣ ಸಾಧುವು ಮುರಿದುಮೆಲವೋ |
ಹಗರಣಿಗ ನೀನೇಳು ಮೇಲಕೆ ಕೂಡ್ರು ಬೇಡೆಂದ || ೧೬ ||

ತಿರುಗಿಯಾತಂ ಪಕ್ಕದೊಳು ಕೂ |
ತಿರುವ ಸೋಮನ ಗೌಡರಂ ಕೈ |
ಬೆರಳಿನಿಂ ಸಲೆ ತೋರಿಯಿವರನುಮೆಬಿಸಬೇಕೆಂದು ||
ಸಿರಿದು ಛಲಮಂ ಮಾಡೆಯಜ್ಞನು |
ಮುರಿದುಮವನಂತಾಗು ನೀನೆನೆ |
ಚರದರ್ಥಕಮಡರಿತಾಗಳೆ ದುಷ್ಟವರನಾರಿ || ೧೭ ||

ಇತ್ತ ಭಕ್ತರು ಮಂಗಳಾರತಿ |
ಯೆತ್ತಿ ಜನರುಂ ನಡಿಯೆ ತುಂಟನ |
ಪೊತ್ತುಮೊಯ್ದರು ಮನೆಯ ಜನರದವಳಲುಮಂ ಪೊಂದಿ ||
ಸುತ್ತಿದಾ ನರ ಪರಿವುದಂ ಬಳಿ |
ಕೆತ್ತ ನೋಡ್ದೊಡು ಚುಚ್ಚುವದನುಂ |
ಕುತ್ಸಿತನು ತಾಂ ಪಡೆಪು ರೋದಿಸಿ ಬಿದ್ದ ಮನೆಯೊಳಗೆ || ೧೮ ||

ಅದಕಮುರ್ಚಿಸು ಸುಜನರಂ ನೀಂ |
ಪದ ಕಮಲಮಂ ಪೊತ್ತು ಶಿರದಲಿ|
ಪದಿಟೆಯುಂ ಬಿಡು ತತ್ತ್ವದಾ ಮಿಗೆ ಚಿಂತೆಯಂ ಮಾಡು||
ಅದಕುಳಿಯನುಂ ಪಡೆದು ಯೌವನ |
ಮದವನುಂ ಮರ್ದಿಸುತೆ ಕಾಮನ |
ಕದನಮಂ ನೆರೆ ಗೆಲ್ದು ನೀನುರೆ ಬಾಳು ಸರ್ಗದೊಳು || ೧೯ ||

ಪಲವು ಶಿಷ್ಟಾಚಾರ ಪದಮಂ ।
ನಲಿದು ಪಾಲಿಪ್ಪುದು ವಿಚಾರದಿ ।
ತುಳಿದು ಕೆಲಬರು ಸೇವು ನಿತ್ಯವ ಮನಕೆ ಬಂದಂತೆ ॥
ಅಲೆದನೇಕಪನೆನಿಸಿಯನ್ನೃತ ।
ಕೊಲೆದಘ ನಿಚಯಮಂ ಥರಿಸಿ ಮಿಗೆ
ಪುಲಿಯವೋಲ್ ಕುಬಿಬಿಕ್ಕಿರುವರಂ ಬಿಡು ನಿರಂತರವು ॥ ೨೦ ॥

ಇರಲಿದಿಲ್ಲಿಗೆ ಮುಂದಮಿನ್ನೊಂ ।
ದೊರೆವೆನತ್ಯಾಶ್ರಮಿಯ ಮಹಿಮೆಯ ।
ನರವಳಿಯರೆಲ್ಲರ್ಕಳಿದನಾಲಿಪುದು ವಿಶ್ವಸದಿ ॥
ಶರಿರಮಂ ಯತಿ ಸೇವೆಯೊಳಗಂ ।
ಕರಗಿಸುವೆನೆಂತೆಂದು ವಾಲ್ಮಿಕಿ ।
ಯರ ಮನೆಯ ಯಮುನವ್ವನಿಹಳು ಸ್ನಿಗ್ಧೆ ಮಹಾ ಮುಗ್ಧೆ ॥ ೨೧ ॥

ಕಿರುಕಸಾಲೆಯ ತಪ್ಪಲಂ ತಾಂ ।
ನಿರುತಮೆಲ್ಲೆಡೆ ಪುಡುಕಿ ತಪ್ಪದೆ ।
ತರುತಮಜ್ಜನ ಚರಣದೊಳಗರ್ಪಿಸುವ ಕಾಯಕವ ॥
ಹರುಷದಿಂ ಮಾಡುತ್ತಮಾತನ ।
ವರ ಕೃಪೆಗಮತಿಪಾತ್ರಳಾಗುತ ।
ಮೆರೆಯುತಿದ್ದಳು ತಾನೆ ಕಸಗೂಡಿಸುವದುಂ ಮಾಡಿ ॥ ೨೨ ॥

ಯತಿಯು ಮುದದಿಂದೊರ್ಮೆಯಾಕೆಗೆ ।
ಹಿತದಿ ಬಹುದಿನ ಸೇವೆಯಂ ನೀಂ ।
ಖತಿಗೊಳದೆ ಮಾಡಿರ್ಪೆಯದರಿಂ ನೀನು ಬಯಸಿದುದ ॥
ಅತುಳ ತುಷದಿಂ ಕುಡುವೆ ಬೇಡೆನೆ।
ವ್ಯಥೆಯನುಂ ಕುಡುತಿರ್ಪ ಬಡತನ ।
ವತಿಗಳೆದು ಸೌಭಾಗ್ಯಮಂ ಕುಡು ದೇವ ನೀನೆನ್ನೆ ॥ ೨೩ ॥

ಸೇ ತುರೀಯಾತೀತ ಭಕ್ತರ ।
ಪ್ರೀತ ಸತ್ಯಸಮೇತ ಚಿತ್ತಗ ।
ವ್ರಾತದಿಂ ಪರಿಪೂತ ಚಿತ್ತಜ ವೈರಿಯರಿದಾತ ॥
ಆತುಮನ ನೀ ತಿಳಿದು ಲೌಕಿಕ ।
ಯಾತನೆಯ ಬಿಟ್ಟಿಕ್ಕಿ ಭವಿಗಳ ।
ಘಾತಕವನುಂ ಭೇದಿಸುವನಲತೇಜನೆಂದಿಹರು ॥ ೧೬ ॥

ಇನ್ನು ಮತ್ತೊಂದೊರೆವೆನೀತನ ।
ಚನ್ನವಾದ ಮಹತ್ವಮುಂ ನಾಂ ।
ಧನ್ಯ ಭಕ್ತರು ನಲಿದು ಕೇಳ್ದಡೆ ಕಲಿಯ ಮಲದಿಂದೆ ॥
ಅನ್ವಿತಾಗವೆರಡಳಿಪು ಚಿರಂ ।
ಪನ್ನಗಾಭರಣನಲಿ ಬೆರೆಯುತ ।
ಬನ್ನಮಂ ಕುಕ್ಕುರಿಪುತಲೆವರುಮುತುಳ ಸಂಭ್ರಮದಿ ॥ ೧೭ ॥

ಸರಸದಿಂದೀ ಮಾ ಕವೀಶ್ವರ ।
ಮೆರೆವ ಭೈರಿಯ ಕೊಪ್ಪದಿಂದಲಿ ।
ಯುರು ಸುಜನರಿಂದೊರ್ಮೆ ಹೊಳೆಯಾಲೂರಿನಲ್ಲಿರ್ಪ ॥
ಪರತರೆಚ್ಚರಸ್ವಾಮಿ ದರ್ಶನ ।
ಕರುಮೆಯಿಂ ತಾಂ ಪೊರಟು ಹುಬ್ಬಳಿ ।
ಪುರದ ನಿಲ್ದಾಣಕ್ಕೆ ಬಂದ ವಿಲಾಸಮಂ ಪೊಂದಿ ॥ ೧೮ ॥

ಮುಂದೆ ಗಾಡಿ ತಯಾರವಿರೆ ಜನ ।
ಸಂದಣಿಯನುಂ ನೋಡಿ ಡಬ್ಬಿಯೊ ।
ಳಿಂದು ಸ್ಥಳಮುಂ ತೆರವು ಮಿಲ್ಲೆಂತೆಂದು ಭಕ್ತರಿಗೆ ॥
ಒಂದೆಯುಂ ದೂರದಲಿ ಕಾಂಬುವ ।
ನಿಂದಗಾಡಿಗೆ ಮಿಗೆ ತೊಡರ್ಚದ ।
ಸುಂದರದ ಪೇರ್ಡಬ್ಬಿಯಂ ತೋರ್ದೇರಿದದರಲ್ಲಿ ॥ ೧೯ ॥

ಬಳಿಯ ಭಕ್ತರ ಬಳಗವಾಗಳ್ ।
ನಿಲದೆ ಬಿತ್ತರಿಸಿದರು ಗುರುವಿಗೆ ।
ತಿಳಿಯೆ ಖಾಲೀ ಡಬ್ಬಿಯಂ ಬಿಟ್ಟಹರುವಿಾಸ್ಥಳದಿ ॥
ಒಲೆದುವಿದನೊಂದೇರಿ ಕುಳಿತೊಡೆ ।
ಹಳುವರರು ನಗದಿಪ್ಪರೇ ಎನೆ ।
ಹಳಹಳಿಯನುಂ ಬಿಟ್ಟು ಪತ್ತಿರಿಯೆನ್ನನುಡಿ ಸಂಬಿ ॥ ೨೦ ॥

ಬಲ್ಲ ಗುರುವಿಂತುಸುರೆ ತಕ್ಷಣ ।
ವೆಲ್ಲ ಭಕ್ತರು ಕುಳಿತುಕೊಳೆ ನಗು ।
ತಲ್ಲಿಯಾಜನ ಮೆಳ್ಪಡಿದುವಿಲ್ಲೇಕೆ ನೀವೆಂದು ॥
ಅಲ್ಲಣಿಕೆಯಂ ಮಾಡಿ ಡಬ್ಬಿಯು ।
ಮಿಲ್ಲಿಹುದು ಬನ್ನಿರೆನೆ ಯತಿಯುಂ ।
ಬೆಲ್ಲದಂತಹ ವಚನವಂ ಪೇಳಿದನುಮವರಿಂಗೆ ॥ ೨೧ ॥

ನಮಗವಿಾ ಭೂವಲಯದೊಳಗಂ ।
ಸಮನಿಸದ ವಿಷಯಂಗಳಿಲ್ಲಂ ।
ಸುಮತಿಯಿಂ ಕುಳಿತಲ್ಲೆಯರಿಪೆವು ತ್ರಿಜಗ ಬಾತಮಿಯ॥
ಅಮರ ವಿದ್ಯೆಯನರಿದ ಪುರುಷರಿ ।
ಗಮಿತ ಫಲ ಕೈಸಾರ್ದಪುದುವಿದು ।
ಸಮುಚಿತೆಂತೆಂದರಿತು ಕೊಳ್ಳಿರಿ ನಿಮ್ಮ ಮನದೊಳಗೆ ॥ ೨೨ ॥

ಶಿವನಿಗುಂ ಸದ್ಬುದ್ಧಿಯಂ ಪೇ ।
ಳುವ ಹವಣಿಹುದು ನಮ್ಮೊಳದರಿಂ ।
ಶಿವನಿಗಿಂ ಶಿವಶರಣರುನ್ನತರೆಂದು ಶೃತಿಯಿಹವು ॥
ಶಿವನೆ ನಮ್ಮುಪಚಾರಗೈಯ್ವಡೆ ।
ಭುವಿಯೊಳೆಮಗರಿದಾದುವಿಲ್ಲಂ ।
ಸ್ತವೆಯುತಿರ್ಪೆವು ಸಮರಸದ ಸಖನುಂ ಸಮ್ಮುಲ್ಲಸದಿ ॥ ೨೩ ॥

ಅಷ್ಟಸಿದ್ಧಿಗಳೆಮ್ಮ ವಶವಿರೆ !
ಶಿಷ್ಟ ತಮರೆಂದೆನಿಸಿ ಭುವಿಯೊಳು ।
ಮಟ್ಟಹಾಸದೊಳಿಹೆವು ಭೂಕೈಲಾಸವಂ ಮಾಡಿ ॥
ಸುಟ್ಟಪೆವು ಜನನಾಗಿ ವಿಪದಂ ।
ಕೊಟ್ಟು ಕಳಿಪೆವು ಶಿಷ್ಯರಿಗೆ ಸುಖ ।
ಬಿಟ್ಟು ತನುವಂ ನಿಲ್ಲುವೆವು ನಿರ್ಭಯ್ಯವತರಾಗಿ ॥ ೩೪ ॥

ಸಾರ ನೀರಾಟಾಸೆಯೊಲು ನಾವ್ ।
ಧಾರುಣಿಯ ಬಾಳ್ತೆಯನು ಮಾಳ್ಪೆವು ।
ಮಾರಭಯವೇನೆಮಗೆ ಜನಕಾದಿಗಳವೋಲಿಹೆವು ॥
ಆರಡಿವೆದೆಯನಂ ನಿರೋಧಿಸಿ ।
ಪಾರಮಾರ್ಥವನರಿದು ಸಂಸೃತಿ ।
ಸೂರೆಯಂ ಮಿಗೆ ಮಾಡಿದೆಮಗಿನ್ನಾವ ಸಂಕೋಚ ॥ ೩೫ ॥

ಇಂತುಸುರುತಿರೆಯಂದು ಗದ್ದಲ ।
ದಂತಪಾರವ ಕಾಂಬದಲ್ಲಿ ದು ।
ರಂತ ಸಂಭವಿಪುದನುಮೂಹಿಸಿ ಗಾಡಿಯಾ ಜನರು ॥
ನಿಂತ ಡಬ್ಬಿಯನಜ್ಜಡರ್ದವ ।
ಪಿಂತಿನಿಂದಂ ತಂದು ಗಾಡಿಯ ।
ದೇಶಿಮದ ಕೊಂಡಿಂಗಮಂಟಿಸಿಬ್ಬೈದುಬಿಟ್ಟರಲಾ ॥ ೩೬ ॥

ಆಗ ಕೈಪರಿ ಗುಟ್ಟಿಯಜ್ಜನು ।
ಕೈಗೆಡುವದಿಲ್ಲೆಮ್ಮ ಕಾರ್ಯಂ ।
ಸಾಗಿಸುವನು ಗಿರೀಶನೆಂಬಭಿಮಾನವೆಮಗೊಳವು ॥
ಬೀಗಿ ನಾಂ ಪೇಳಿದೆನುಮಾದೊಡು ।
ಹೇಗೆತನನುಂ ಪೊಂದಿದಿರಿ ನೀವ್ ।
ಯೋಗಿಯುಂ ನಿರ್ಲಕ್ಷ್ಯದಿಂದಂ ಕಾಣದಿರಿಯೆಂದ ॥ ೩೭ ॥

ಅವರುಮಾಡೊಡು ಮಿೂ ಮಹತಿಯಂ ।
ಸವುಸವದಿಯುೞಕಂಡು ತಮ್ಮೊಳು ।
ಮವಗಡವನುಂ ಸಂಹರಿಸಿದೆವುಮಜ್ಞನಾದಯದಿ ॥
ಅವನಿಯೋಳವತಾರಿಕನಿವಂ ।
ಭವ ಸಮುದ್ರದ ತಾರಕನಿವಂ ।
ಶಿವದಿಡುವ ಸದ್ಭಕ್ತರಂ ಪೊೞವಾತನಿವನೆಂದು ॥ ೨೮ ॥

ಕೊಂಡುಕೊನೆಯಂ ಮಾಡಿ ಯತಿಪನ ।
ಮಂಡಳಿಯು ಮಂಡಿಸುತೆ ಪಾದಕೆ ।
ರುಂಡಮಂ ನೆರೆ ಪಚ್ಚಿ ನತಿಯಿಂಬಾಗಿ ಮನದೊಳಗೆ ॥
ತುಂಡುವಾಗದಖಂಡ ವಸ್ತುವ ।
ಕಂಡು ನೆಮ್ಮದಿಯಿಂದೆ ಬಾಳುವ ।
ಗಂಡುಗಲಿಯಿವನೆಂದು ಮುದದಿಂ ತಿಳಿದುಕೊಂಡರಲಾ ॥ ೨೯ ॥

ಪರಮ ವಿಷ್ಣುವು ಬರುವದಂ ತಾ ।
ನರಿತು ಸರ್ಪದ ಕೈಪಮಂ ಮಿಗೆ ।
ಧರಿಸಿಯಾನೆಯ ಚರ್ಮಮಂ ಬಿಳಿಬೂದಿಯಂ ತಳೆದು ॥
ಹರುಷದಿಂದಮಿದಿರ್ಗೊಳೆ ಫಣಿಯು ।
ಗರುಢನಂ ತಾಂ ಕಂಡು ಧಾವಿಸೆ ।
ವರದಿಂಗಬರನಾದ ಮೂರ್ತಿಯು ಪೊರೆಯಲೆಮ್ಮುವನು ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮದ
ತ್ಯಾಶ್ರಮಿೂ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೧೬ನೇ ಅಧ್ಯಾಯವು ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೪೯೧

# ೧೭ನೇ ಅಧ್ಯಾಯ

ಸೂಚನೆ :

ಮೆರೆವ ಸಾಧುವರನಿಗೆ ಪಂಡರ ।
ಪುರದೊಳೇಕಾದಶಿಯ ದಿನದೊಳು ।
ಸುರಸ ಪೋಳಿಗಿಯೂಟವಾದುದ ಚಿತ್ರಿಸುವೆನಿಲ್ಲಿ ॥ ಪಲ್ಲ ॥

ಗಳಪುವೊಡೆ ನಾಲ್ಕಾರು ಪಣವುಂ ।
ಗಳಿಸುವಧಿಕಂ ಪುತರಪಡೆವೊಡೆ ।
ಕಲಿಮನದೆ ನಾಲ್ಕಾರಿರಲಿ ಜಾಸ್ತೆಂದು ಮಾತಾಡಿ ॥
ಕುಲತಿಲಕನಿವನೆಂದು ಬಣ್ಣಿಸಿ ।
ಕೊಲ ಮನೆಯು ಬರ್ದುಂಕೆನ್ಸೊಳಗಂ ।
ಕೊಳೆಯ ಪಜ್ಜುವ ಕುಸೃತಿಗು ನಿಜ ತೋರು ಪರಮಾತ್ಮಾ ॥ ೧ ॥

ಒಮ್ಮೆ ಪಂಡರಪುರಕೆ ಭಕ್ತರ ।
ಸಮ್ಮಿಳದೆ ಗುರುದೇವನೈದನು ।
ಸಮ್ಮುದದಿ ವಿಷ್ಣುವಿನ ದರ್ಶನ ಪಡೆದು ಕೂಡ್ರಲ್ಕೆ ॥
ಉಮ್ಮಳಿಸುತಾ ಭಕ್ತ ನಿಚಯವು ।
ದಿಮ್ಮಿದಗೆ ಪೇಳಿದರುವಿಂದುಂ ।
ನಿಮ್ಮಗೇಕಾದಶಿಯಿಹುದರಿಂ ಸಿಗದು ಪೋಳ್ಗೆಂದು ॥ ೨ ॥

ಇಂದುವೇಕಾದಶಿಯುಮಿದ್ದೊಡು ।
ಪೊಂದುವೆಂ ಪೋಳಿಗೆಯ ಚಯಮಂ ।
ತಂದೆ ರುದ್ರನು ನಲ್ವರಿಕೆಯುಂ ಮಾಡಿಹನುಮೆನಗೆ ॥
ಅಂದವಾದೆನ್ನ ಫಣೆ ಬರಹಕೆ ।
ಕುಂದುಮೆಂದಿಗುಮಿಲ್ಲವಿಲ್ಲಿಯೆ ।
ಬಂದು ಬೀಳ್ವವುವಿಂದು ಹೊರಿಗೆ ನೋಡಿರೆಂತೆಂದ ॥ ೩ ॥

ಪಿಂದಿನಾ ಜನ್ಮದೊಳಗಾನುಂ ।
ನಂದದಿಂ ಪೋಳಿಗಿ ಟಿಕೀಟಂ ।
ಸಂಧಿಸಿಹೆನಾಯಸಮಂ ನಾಂ ತಾಳೆನದಕಾಗಿ ॥
ಇಂದುಮೂರುಂ ಕುಡದೆ ಪೋದೊಡು ।
ಚಂದ್ರಮೌಳಿಯು ತನ್ನ ಮನೆಯಲಿ ।
ಚಂದ ಪಾರ್ವತಿಯಿಂದೆ ಮಾಡಿಸಿ ತರುವ ತಿಳಿರೆಂದ ॥ ೪ ॥

ಇಂಥ ಪೇರ್ಶಿಗಸಿಯೊಳು ನಮ್ಮಗೆ ।
ಸಂತವಣೆಯಂ ಮಾಳ್ಪರಾರುಂ ।
ಮಂಥುಮಂ ಮಿಗೆ ಕಳೆದು ಬಿರ್ದಣ ಕೊಡುವ ಜನರಾರು ॥
ಸಂತರೆಲ್ಲರುಪಾಸವಿರೆ ನಿಮ ।
ಗೆಂತು ಕಾರ್ತಿಕದೊಳಗೆ ಲಭಿಪ್ಪುದು ।
ಕುಂತುಮಿೂ ಪರಿಹಾಸ್ಯಮಂ ಮಾಡಿದರುಮಜ್ಜನಿಗೆ ॥ ೫ ॥

ಆರಳುಮರಳಿಟ್ಟುಗಳುಮುಂಡಿಯು ।
ತರತರದ ಫಲಹಾರ ಮಂಡಕಿ ।
ಕೊರೆದ ಸಕ್ಕರಿ ಹಲ್ಪಿ ಸಂಜೆಗೆ ಸಿದ್ಧ ಮಾಡುತಿರೆ ॥
ಅರಸಿ ಪೋಳಿಗಿ ಮಾಡುವವರಾ ।
ರರಿದು ನೋಡ್ದೊಡೆ ನೀವು ನಂದೆಯು ।
ಸರಸದಿಂ ಮಾಡುವದು ಬಂತೆಂದಜ್ಜಗಂ ಪೇಳೆ ॥ ೬ ॥

ತಿರುಗಿಯಜ್ಜನು ನನ್ನ ವಚಮಂ
ಹರುಷದಿಂ ನೀವ್‌ಕೇಳಿ ತಿಳಿದೊಡೆ ।
ಸರಗುಣಿಕೆಯಂ ಜಡಿವ ಮಾಯಾ ಲೋಹಮಂ ದಾಂಟಿ ॥
ಪರಮಹಂಸತೆಯೆಂಬ ಕಲೆಯಂ ।
ಧರಿಸಿ ಪರಸುಖವೆರಿಸಿ ಸತತಂ ।
ಗುರುಪರಾತ್ಮನ ಕರುಣಮಂ ಪಡೆಯುವಿರಿ ಸಂಭ್ರಮದಿ ॥ ೭ ॥

ನಂಬಿದಾತಗವಿಂಬು ನಂಬವ ।
ಶುಂಭರಿಗೆ ಪೇರಂಬು ನಾನಿರೆ ।
ಕುಂಭಿನಿಯೊಳಂ ನಂಬದವರಂ ತರಿವೆ ಜಂಕಿಸುತೆ ॥
ಅಂಬುಜಭವಾಂಡ ಕುಳಮುಂ ಸಲೆ ।
ಯಿಂಬಿರಿಸಿ ಪ್ರತಿಸೃಷ್ಟಿಯಂ ಸುರ ।
ಮುಂಬಿ ಮಾಳ್ಪೆನುವಿೂಯೊಸಗೆಯಂ ನೀವ್ ನಂಬಿರೆಂತೆಂದ ॥ ೮ ॥

ನಮ್ಮ ನುಡಿಯಂ ತಗದು ಪಾಕುವ ।
ಹಮ್ಮುನಾರಿಗುವಿಲ್ಲವಿದ್ದೊಡೆ ।
ಕನ್ಮು ತುಂಬಿಯೆ ಬಂದಿತವರದುವೆಂದು ತಿಳಿಬಹುದು ॥
ಬ್ರಹ್ಮಗುಂ ಮಿಗಿಲೆನಿಪ ಪರತರ ।
ಬ್ರಹ್ಮವೇ ನಾವೆಂದರಿವೆನುಗೆ ।
ಕಮ್ಮು ತಾನೇನಿಹುದು ತಿಳಿಯಿರಿ ವಿಶ್ವಸವ ಪೊಂದಿ ॥ ೯ ॥

ಮೂರುಕೋಟಿ ಸುಶಿಷ್ಯರೊಳು ಬರಿ ।
ಮೂರುಜನವುಳಿದರು ಪರೀಕ್ಷಿಸೆ ।
ಧೀರನಾದ ವಶಿಷ್ಠಗುಉ ಬಿಡೆ ನೋಡಿ ಬಿಳ್ಕಡಿದು ॥
ಆರೊಳಗೆ ನಂಬಿಗೆಯುಮಿಹುದೋ ।
ಸೇರುವರು ಶಿವಲೋಕವೆಂಬುದ ।
ಸಾರುತಿಹುದೀ ಮಾತು ವೇದವು ನಂಬಿ ನಡಿವೆಂದ ॥೧೦॥

ಒಂದು ಫಂಡರಪುರದಿ ಬ್ರಾಹ್ಮಣ ।
ನೊಂದು ಗೃಹದೊಳು ಶ್ರಾದ್ಧವಿದೆ ಬಲು ।
ಗಂಧಯುತ ಪೋಳಿಗಿ ತಯಾರಿಸಿಯೂಟಕೊಬ್ಬರನು ॥
ನಿಂದು ಪರಶಿಯೊಳರಸುತಿರೆ ಸಿಗ ।
ದೆಂದು ತಮ್ಮೊಳು ಚಿಂತಿಸುವಿನಂ ।
ಬಂದ ಫಂಡರಿನಾಥನುಂ ನರವೇಷವುಂ ತಾಳಿ । ॥ ೧೧ ॥

ಪಿಂದಿನಾ ಜನ್ಮದೊಳಗಾನುಂ ।
ನಂದದಿಂ ಪೋಳಿಗಿ ಟಿಕೀಟಂ ।
ಸಂಧಿಸಿಹೆನಾಯುಸಮುಂ ನಾಂ ತಾಳೆನದಕಾಗಿ ॥
ಇಂದುಮೂರುಂ ಕುಡದೆ ಪೋದೊಡು ।
ಚಂದ್ರನವೌಳಿಯು ತನ್ನ ಮನೆಯಲಿ ।
ಚಂದ ಪಾರ್ವತಿಯಿಂದೆ ಮಾಡಿಸಿ ತರುವ ತಿಳಿರೆಂದ ॥ ೪ ॥

ಇಂಥ ಪೇರ್ಸರಸಿಯೊಳು ನಮ್ಮಗೆ ।
ಸಂತವಣೆಯಂ ಮಾಳ್ಪರಾರುಂ ।
ಮಂಥುವುಂ ಮಿಗೆ ಕಳೆದು ಬಿರ್ದಣ ಕೊಡುವ ಜನರಾರು ॥
ಸಂತರೆಲ್ಲರುಪಾಸವಿರೆ ನಿಮ ।
ಗೆಂತು ಕಾರ್ತಿಕದೊಳಗೆ ಲಭಿಪ್ಪುದು ।
ಕುಂತುವಿೞ ಪರಿಹಾಸ್ಯಮಂ ಮಾಡಿದರುಪಜ್ಜನಿಗೆ ॥ ೫ ॥

ಅರಳುಮರಳಿಟ್ಟುಗಳುಮುಂಡಿಯು ।
ತರತರದ ಫಲಹಾರ ಮಂಡಕಿ ।
ಕೊರೆದ ಸಕ್ಕರಿ ಹಲ್ಪಿ ಸಂಜೆಗೆ ಸಿದ್ಧ ಮಾಡುತಿರೆ ॥
ಅರಸಿ ಪೋಳಿಗಿ ಮಾಡುವವರಾ ।
ರರಿದು ನೋಡ್ದೊಡೆ ನೀವು ನಂದೆಯು ।
ಸರಸದಿಂ ಮಾಡುವದು ಬಂತೆಂದಜ್ಜಗಂ ಪೇಳೆ ॥ ೬ ॥

ತಿರುಗಿಯಜ್ಜನು ನನ್ನ ವಚಮಂ
ಹರುಷದಿಂ ನೀವ್‌ಕೇಳಿ ತಿಳಿದೊಡೆ ।
ಸರಗುಣಿಕೆಯಂ ಜಡಿವ ಮಾಯಾ ಲೋಹಮಂ ದಾಂಟಿ ॥
ಪರಮಹಂಸತೆಯೆಂಬ ಕಲೆಯಂ ।
ಧರಿಸಿ ಪರಸುಖವೆರಿಸಿ ಸತತಂ ।
ಗುರುಪರಾತ್ಮನ ಕರುಣಮಂ ಪಡೆಯುವಿರಿ ಸಂಭ್ರಮದಿ ॥ ೭ ॥

ನಂಬಿದಾತಗಮಿಂಬು ನಂಬವ |
ಶುಂಭರಿಗೆ ಪೇರಂಬು ನಾಸಿರೆ |
ಕುಂಭಿನಿಯೊಳಂ ನಂಬವವರಂ ತರಿವೆ ಜಂಕಿಸುತೆ ||
ಅಂಬುಜಭವಾಂಡ ಕುಳಮಂ ಸಲೆ |
ಯಿಂಬಿರಿಸಿ ಪ್ರತಿಸೃಷ್ಟಿಯಂ ಹುರ |
ನುಂಬಿ ಮಾಳ್ಪೆನುಮೊಯೊಸಗೆಯಂ ನೀವ್ ನಂಬಿರೆಂತೆಂದ || ೮ ||

ನಮ್ಮ ನುಡಿಯಂ ತಗಮ ಪಾಕುವ |
ಹಮ್ಮನಾರಿಗುಮಿಲ್ಲಮಿದ್ದೊಡೆ |
ಕಮ್ಮ ತುಂಬಿಯೆ ಬಂದಿತವರದುಮೆಂದು ತಿಳಿಬಹುದು ||
ಬ್ರಹ್ಮಗುಂ ಮಿಗಿಲೆನಿಪ ಪರತರ |
ಬ್ರಹ್ಮವೇ ನಾವೆಂದರಿದೆನುಗೆ |
ಕಮ್ಮ ತಾನೇನಿಹುಮ ತಿಳಿಯಿರಿ ವಿಶ್ವಸವ ಪೊಂದಿ || ೯ ||

ಮೂರುಕೋಟಿ ಸುಶಿಷ್ಯರೊಳು ಬರಿ |
ಮೂರುಜನವುಳಿದರು ಪರೀಕ್ಷಿಸೆ |
ಧೀರನಾದ ವಶಿಷ್ಠಗುರು ಬಿಡೆ ನೋಡಿ ಬಿಳ್ಕಡಿದು ||
ಆರೊಳಗೆ ನಂಬಿಗೆಯುಮಿಹುದೋ |
ಸೇರುವರು ಶಿವಲೋಕವೆಂಬುದ |
ಸಾರುತಿಹುದೀ ಮಾತು ವೇದವು ನಂಬಿ ನಡಿವೆಂದ ||೧೦||

ಅಂದು ಫಂಡರಪುರದಿ ಬ್ರಾಹ್ಮಣ |
ರೊಂದು ಗೃಹದೊಳು ಶ್ರಾದ್ಧವಿದೆ ಬಲು |
ಗಂಧಯುತ ಪೋಳಿಗಿ ತಯಾರಿಸಿಯೂಟಕೊಬ್ಬರನು ||
ಸಿಂದು ಪರಶಿಯೊಳರಸುತಿರೆ ಸಿಗ |
ರೆಂದು ತಮ್ಮೊಳು ಚಿಂತಿಸುವಿನಂ |
ಬಂದ ಫಂಡರಿನಾಥನುಂ ನರವೇಷವನುಂ ತಾಳಿ | || ೧೧ ||

ಶಿರದೊಳಗೆ ಶಿಖೆಯಂ ಕೊರಳೊಳಗೆ ।
ಸರಸದಾ ಜನಿವಾರಮಂ ಫಣೆ ।
ಗುರೆ ಸುಗಂಧದ ಗೆರೆಯನುಂ ಜರಿ ಸೆಲ್ಲೆಯಂ ಧರಿಸಿ ॥
ನಿರಿಗೆಯಂ ತೀಡಿರ್ದ ವಲ್ಲಿಯ ।
ಮೆರಗಿನಿಂದ್ಯೈತಂದುಮುವರಿಗೆ ।
ಮರುಗ ಬೇಡಿರಿ ತೋರಿಪೆನುಮುಂಬವರನೆಂತೆಂದು ॥ ೧೨ ॥

ಕರೆದು ಕೊಂಡಾಜನರವಿಂಡಂ ।
ಪರಸಿಯೊಳಗಂ ಬಂದು ಯತಿಯಂ ।
ಬೆರಲಿನಿಂ ತೋರಿಸಿದ ಭೀಮಾತಟದಲಿಹ ಮುನಿಯ ॥
ಎರಗಿ ಉತಿಪಂಗಾ ಜನಂಗಳು ।
ಮೊರೆವರೌತಣ ವಾರ್ತೆಯಂ ಮಿಗೆ ।
ಹರುಷದಿಂದೊಪ್ಪಿದನುಮರಿದಾಯ್ತಾ ಸುಭಕ್ತರಿಗೆ ॥ ೧೩ ॥

ಎಲ್ಲರಿಗು ಪೋಳಿಗೆಯನುಂ ಸಲೆ ।
ಸಲ್ಲಿಸಿದನುಂ ಧನಿಕ ವಿಪ್ರನು ।
ಬಲ್ಲ ಯತಿ ಮುದವಾಂತುಮಾತಗನೂಶಿಷಂ ಕೊಟ್ಟು ॥
ಎಲ್ಲ ಪಾಪವು ಪಿಂಗಿ ನಿನ್ನಗೆ ।
ಚಲ್ವ ಮಗು ನನ್ನಂಥದುಣ್ಮೃತ ।
ಸಲ್ವ ವೈಕುಂಠದೊಳಗೊಂದುಂ ಸ್ಥಾನ ಸಿಗಲೆಂದ ॥ ೧೪ ॥

ಮರಳಿ ಫಂಡರಪೂರದಿಂದಲಿ ।
ಗುರು ದಿವಾಕರನೊಂದು ಸಮಯದಿ ।
ಚರಿಸುತಂ ತಾಂ ಬಂದನುಂ ನರಗುಂದ ಗ್ರಾಮಕ್ಕೆ ॥
ಪರಮ ಭಕುತರುಮಲ್ಲಿ ಕುರುಪಿಡು ।
ತುರೆ ಸದೋದಿತ ತವಸಿಯುಂ ವರ ।
ಚರಣಮಂ ತೊಳೆತೊಳೆದು ತೀರ್ಥವ ಕೊಳ್ಳುತಿಹರೈಸೆ ॥ ೧೫ ॥

ಅವರಿಗಂ ಯತಿ ಬೋಧಮಂ ಬಲು ।
ಹವಣರಿತು ಮಾಡಿದುದನುಂ ನಾಂ।
ಸವಸವದಿ ತಿಳುಪುವೆ ಯಥಾಮತಿಯಂ ವ್ಯದಾಸಿಸದೆ ॥
ಅವನಿಯೊಳು ಶಿವಜೀವ ಭೇದವು ।
ಸವನಿಸದು ಲವ ಮಾತ್ರವದರಿಂ ।
ದವಚರುತ ಬಲ್ಪಲದ ನಿಜಮಂ ತಿಳಿಯ ಬೇಕೆಂದ ॥ ೧೬ ॥

ಸಿದ್ಧಿಯೊಳು ತಾನಿರ್ಪತೆರನುಂ ।
ಶುದ್ಧ ನಿಜ ಜಾಗ್ರದಲಿಯೋರ್ವಂ ।
ಹೊದ್ದದೀದೇಹಾದಿಯಂ ಬೇರಿರ್ಪ ಸಾಕ್ಷ್ಯನಿಸಿ ॥
ಸಿದ್ಧವಾದೀಯಿರವನುಂ ಗುರು ।
ಸಿದ್ಧನಿಂ ಮಿಗೆ ಯರಿತುಕೊಂಡೊಡೆ ।
ಬದ್ಧ ಭವಮಂ ನಿಗುಚಿ ನಿಲ್ಲುವನೆಂದು ನಿರವಿಸಿದ ॥ ೧೭ ॥

ಕತ್ತೆಯಿಂ ಕಲಿ ತಾಳ್ಮೆಯಂ ನೀಂ ।
ಸ್ತುತ್ಯಸಿಂಹದ ನೋಟಮಂ ಕಲಿ ।
ಮತ್ತೆ ಕುಕ್ಕುಟದೆಚ್ಚರಂ ಕಲಿ ಶುಕದಿ ಕಲಿ ವಚಮಂ ॥
ಇತ್ತ ಶುನ ವಿಶ್ವಾಸಮಂ ಕಲಿ ।
ಸತ್ವರದಿ ಕಲಿ ಜೇಡ ಯತನವ ।
ಸತ್ಯರಿಂ ದೊರೆವಂಥ ನುಡಿಗಳ ಕಲಿಯಿರೆಂತೆಂದ ॥ ೧೮ ॥

ಸತಿ ಸುತರ ಪರಿವಾರವೆಲ್ಲವು ।
ಪತಿಕರಿಸದುಗುಳಿದೊಡು ನನ್ನಯ ।
ಹಿತ ತಮರು ಮಾಡಿದರು ಮೆಂದೀಪತ್ತುನಿಡದವರ ॥
ಹಿತಮುಮಂ ಬಯಸುತ್ತೆ ಗರ್ವಾ ।
ಟತನಮಂ ತಾಳಿದೊಡಮಿದು ಪು ।
ಣ್ಯತಮವಪ್ಪವಪೆಂಬರಿಮೆಯಂ ಬಿಡಿರಿ ನೀವೆಂದ ॥ ೧೯ ॥

ಗೂಟದಾವಿಗೆ ಮೆಟ್ಟಿ ಪರಮನೆ ।
ಯೂಟಮಂ ಮಾಡುತ್ತೆ ಕಪನಿಯ ।
ಮಾಟಮಂ ಪರಿಪೊಂದಿ ಜಡೆಮುಡಿ ತಿದ್ದಿಕೊಳ್ಳುತ್ತೆ ॥
ನೀಟಿರದ ಚಾಪಟೆಯರಿಂಗೀ ।
ಮೇಟಿಯಂತಿಹ ಬೊಮ್ಮ ತಿಳಿವುದೆ ।
ದಾಟ ವೈಸಿರಿಯಂ ಪ್ರಭಾವಿತರಾಗ ಬೇಕೆಂದ ॥ ೨೦ ॥

ಮುಂದೆಯುಂ ವಂದಾರರ್ನೋರ್ವಂ ।
ಬಂದು ಶ್ರೀಗುರುಪಾದ ತಲಮಂ ।
ವಂದಿಸುತೆ ನಿಮಗೂಟಮಂ ಮಾಡಿಸುವೆನೆನೆಯಾಗ ॥
ಅಂದದಿಂ ಯತಿಯುಸುರಿದವಗಂ ।
ಕೆಂದು ವರ್ಣ ಕಚೂರಮಂ ತರಿ ।
ಸೆಂದು ತರಿಸುತಮದರ ಪೋಳಿಗಿ ಮಾಡಿಸೆಂತೆಂದು ॥ ೨೧ ॥

ತನ್ನ ಕೆಲ ಸಾಮುಗ್ರಿಯಂ ವರ ।
ಚನ್ನ ಭಕ್ತನಿಗಿತ್ತಿವುಗಳಂ ।
ಸಣ್ಣವಾಗರಿ ಪೋಳಿಗೆಯೊಳಂ ಬೆರಸು ರುಚಿಸುವವು ॥
ಧನ್ಯನಿಂತುಸುರಿ ಕುಡೆಯೊಯ್ದೊ ।
ಗಣ್ಯ ಭಕ್ತನುಮಂತೆಸಗುತಂ ।
ಬೆನ್ನನೈತರುತೀಯತಿಯನುಂ ಕರೆದನೂಟಕ್ಕೆ ॥ ೨೨ ॥

ಧೀರ ಯತಿಪಂ ಬಂದು ಬೇಗದಿ ।
ಮೂರು ಪೋಳಿಗೆಯೊಳಗೆ ನಾಲಕು ।
ಹಾರಯಿಸಿ ತಾನುಂಡು ಬಳಿಕಾ ಭಕ್ತನಂ ಕೂರ್ತು ॥
ಬೇರೆಯವರಿಗಿದನರ್ಥಮಂ ಕುಡು ।
ಪೂರವೊಂದಂ ನೀಡಿದೊಡೆಯುಂ ।
ದಾರುಣದ ಸ್ಥಿತಿಯಂ ಪಡೆವರಿದು ಸತ್ಯವೆಂತೆಂದ ॥ ೨೩ ॥

ಇತ್ತಮಾಶಾಪುರುಷನೋರ್ವಂ ।
ಸತ್ತರುಂ ನಾಬಿಡೆನುಮೆನ್ನುತ ।
ಮತ್ತಳಗಮುಂ ಸ್ಮರಿಸದೊಂದಂ ತಿಂದ ನುಡಿಮಿರ್ದು ॥
ಉತ್ತಮುವರದಿಯಾಗವ.ಎರಿಯುಂ ।
ಪೊತ್ತಿಕೊಂಡುರುಳಾಡಿ ಜಲಮಂ ।
ಪೊತ್ತು ಪೊತ್ತಿಗೆ ಬೇಡುತಿರ್ದಂ ಡಗೆಯನಳಿವುದಕೆ ॥ ೨೪ ॥

ಬೇಗಮುಜ್ಜನ ಬಳಿಗೆ ಸಾರ್ದುಂ ।
ಬಾಗಿಯೊರೆದನುಮುಂಡ ಕಥೆಯಂ ।
ಯೋಗಿವರ ತೆಗಳುತ್ತಮುವನನುಮೌಷಧಂ ಕೊಟ್ಟು ॥
ಸಾಗುಗೊಳಿಸಿದ ಮೊದಲಿನಾವೋಲ್ ।
ಬೇಗುದಿಯುಮಾಗಾರ್ದ ತಣ್ಣಗ ।
ಮಾಗಸಿಯು ತಾನಾದ ನೀ ಪ್ರಭುವರನ ಕೃಪೆಯಿಂದೆ ॥ ೨೫ ॥

ಎಂಥ ಮಾಮಾಸಾಳುಮಿದ್ದೊಡು ।
ಸಂತನಾ ಪೋಳಿಗೆಯನೊಂದಂ ।
ಹೊಂತದಿಂ ಮಿಗೆ ಮೆಲ್ದು ದಕ್ಕಿಸಲಾರನೆಂದೆಂದು ॥
ಇಂಥ ನಾಲುಕು ಪೋಳಿಗೆಯನುಂ ।
ಸಂತಪಿಸದೆಯು ಮೆಲ್ದುಮಾರ್ಯಂ ।
ಸಂತುಷದಿ ನಲಿದಾಡುತಿರ್ದನಬಾಧವತನಾಗಿ ॥ ೨೬ ॥

ಜಗವನೇ ತಾಂ ತಿಂದು ದಕ್ಕಿಸು ।
ವಗೆಯಿದೇನರಿದಲ್ಲ ತಿಳಿವಡೆ ।
ನಿಗಮ ಗೋಚರನಂಗವೇಯಂಗಾರವೆಂತೆಂದು ॥
ಅಗಸುತೇಶನ ಭಕುತರೆಲ್ಲರು ।
ಮುಗಿದು ಕರಗಳನಿಂತು ಯತಿ ಪದ ।
ಯುಗಳಮಂ ಕೊಂಡಾಡಿದರು ನಿರ್ಮಳದಮನವುಕ್ಕಿ ॥ ೨೭ ॥

ನೀನು ಶುದ್ಧ ಪವಾಡ ಪುರುಷಂ ।
ಜ್ಞಾನಿಗಳಿಗಾರಾಧ್ಯ ದೇವಂ ।
ಬಾನಿನೊಳು ಭಾಸ್ಕರನವೋಲೀ ಕ್ಷೋಣಿಯೊಳಗಿರ್ದು ।।
ಆ ನಕಾರದ ಮಾಯೆಯಂ ಮಿಗೆ ।
ಮಾನಿಸದೆ ಮಾಮುಸಕದಿಂದಂ ।
ಮಾನಸಕಗೋಚರದ ನಿಜಮಂ ತಿಳುಪುವವ ನೀನುಂ ।। ೨೮ ।।

ನಿನ್ನ ಬೋಧೆಯನಾಲಿಸಾ ಜನ ।
ಪನ್ನಗಾರಿಕೆಯಂ ವಿಭಂಗಿಸಿ ।
ನನ್ನಿಯಿಂ ನೈಷ್ಕರ್ಮ್ಯಮಂ ಸಲೆ ಪೊಂದಿ ಶೋಭಿಪರು ।।
ಅನ್ನಮಂ ನಿನಗಿತ್ತ ಭಕ್ತರು ।
ಪುಣ್ಯಮಂ ಸಂಪಾದಿಸುತ್ತಂ ।
ಧನ್ಯರುಂ ತಾವಾಗಿಯೊಗುಮಿಗೆ ಪೂಜ್ಯರಾಗುವರು ।। ೨೯ ।।

ಗರುಡ ಪಂಚಾಕ್ಷರಿಯನುಂ ನುಡಿ ।
ದರೆಯುರಗವಿಷ ಸರಿಯುವಾ ಪರಿ ।
ಹರನ ಪಂಚಾಕ್ಷರಿಯ ಮಂತ್ರಮುಮಂ ಜಪಂಗೈಯ್ಯೆ ।।
ಸರಿವುದದು ಸಂಸಾರ ವಿಷಮುಂ ।
ಹರಿವುದದು ಮರೆ ಮರ್ಬುಮೆಂಬುವ ।
ಶರಣರಾ ನುಡಿ ನೆಚ್ಚಿ ಜಪಿಪೆಂ ಶಿವನೆ ತವ ನಾಮ ।। ೩೦ ।।

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ ಆಧುನಿಕ ಕವಿವರ್ಯ ಗುಡಿಸಾಗರ ಶ್ರೀಮಠ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೧೭ ನೇ ಅಧ್ಯಾಯ ಮುಗಿದುದು ।।

— ಶುಭಃ —

ಒಟ್ಟು ನುಡಿಗಳು ೫೨೧

# ೧೮ ನೇ ಅಧ್ಯಾಯ

ಸೂಚನೆ :

ಜರೆದ ಮನುಜನ ಮರಣಮಂ ಕಡು ।
ಹರೆಯದವನಳಿಯುವದನುಂ ಬ ।
ಲ್ಪರುಪಿ ಯತಿಯುಂ ಖ್ಯಾತನಾದುದು ಬರೆವೆ ಸಂತಸದಿ ॥ಪಲ್ಲ ॥

ಮಾರ ವೈರಿಯೆ ಘೋರ ಪಡಿಸದೆ ।
ಪಾರು ಮಾಡೈ ಭವದ ಶನಿಯಿಂ ।
ವೀರಭದ್ರನೆಯಾಗಿ ದಕ್ಷನ ಶಿರವ ಹರಿದಂತೆ ॥
ಸಾರಿ ಪೇಳುವೆ ಹೇಡಿಯನ್ನಯ ।
ಮೋರೆ ನೋಡಿಯೆ ಜಾರ ಬೇಡೈ ।
ಸಾರ ಮುಕ್ತಿಯನಿತ್ತು ಪೊರೆ ಗಂಭೀರ ಕಾಲಾರಿ ॥ ೧ ॥

ಗುರುವು ತಾನೆಂದೆನುತೆ ದಡ್ಡರ ।
ನೆರವಿಗೆಲ್ಲಕೆ ಪೂಜೆ ಪೇಳುತ ।
ಪರರ ಶಿರಮಂ ಬಿಡದೆ ಬೋಳಿಸಿ ಹಾಳು ಮಾಡುತ್ತೆ ॥
ತಿರುಗುವಾ ಸನ್ಯಾಸಿ ಕಾಲನು ।
ಮುರಿದು ಬಾಯೊಳು ಸುರಿದು ಮಣ್ಣನು ।
ಶಿರ ಪಿಡಿದು ಹೊರ ಡಬ್ಬಿರೆಂಬಗು ಮುದವನಿಡು ಶಿವನೆ ॥ ೨ ॥

ವಿನುತ ಗುಡಿಸಾಗರದಿಯೋರ್ವಳು ।
ಮಣಿದು ಗುರುಪಾದಕೆ ನಿರಂತರ ।
ಮನದೊಳುಣ್ಮಿದ ಭಕ್ತಿಯಿಂ ವರ ಶ್ರವಣಮಂ ಮಾಡಿ ॥
ಮನೆಗೆ ಪೋಗುತಲಿರ್ದಳಿದನುಂ ।
ಜನರು ಕೆಲವರು ನೋಡಿ ತಮ್ಮೊಳು ।
ಸನುಮತಿನಿಸದೆ ಯತಿಗೆ ದೋಷಾರೋಪಣಂಗೊಟ್ಟು ॥ ೩ ॥

ಜರೆಯು ತೊಡಗಿದರಜ್ಞನಂ ಬಲು ।
ಪಿರಿದು ಹೂರಣ ತುಂಬಿ ಮಾಡಿದ ।
ಸರಸ ಪೋಳಿಗಿ ದಿನವು ತಿಂಬುತ ಡರ್‍ರನೇ ಡೇಗಿ ॥
ಆರವರಿಸಿ ತಾಂಬೂಲಮಂ ಮೆ ।
ಲ್ದ ರಗುವರನೊಲು ತಿರಗುವೀತಂ ।
ಧರಿಪನೇಯಿಂದ್ರಿಯದ ನಿಗ್ರಹದ ಪ್ರತಾಪವನು ॥ ೪ ॥

ಚಿನ್ನಿ ಸಕ್ಕರಿ ಖೊಬರಿ ಸೂಸಲು ।
ಬೆಣ್ಣೆಯಂ ನೆರೆ ಕಾಸಿ ಸೋಸಿದ ।
ನುಣ್ಣ ತುಪ್ಪವು ನಾಡೆ ಹದಮಜ್ಜಿಗೆಯು ನೆರ್ಕುದಕೆ ॥
ಚನ್ನ ವುಪ್ಪಿನಕಾಯಿ ದ್ರಾಕ್ಷಿಯ ।
ಹಣ್ಣು ಹಂಪಲ ಮಾವು ಸೀಕಣೆ ।
ತಿನ್ನುವೀತನು ಕಾಮ ಬಾಧೆಯ ತಡೆವನೇ ಜಗದಿ ॥ ೫ ॥

ಯಂತ್ರ ತಂತ್ರವ ಕಟ್ಟಿ ರಟ್ಟಿಗೆ ।
ಮಂತ್ರವಮಂ ಮಂತ್ರಿಸುತೆ ಸ್ತ್ರೀಯಂ ।
ಕಂತ್ರಿಯೊಳಗಂ ಕೆಡವಿಯುವ್ಯವಹಾರಮಂ ಮಾಡಿ ॥
ಗಂತ್ರಿಯಂ ಮುಚ್ಚುತ್ತೆ ತನ್ನ ಸ್ವ ।
ತಂತ್ರತೆಯಲಿಂ ನಡೆದು ಭ್ರೂಣದ ।
ಹಂತೃಕನುಮೆಂದೆನಿಪನಿವನೇಂ ಸಾಧು ಗುಣದವನೇ ॥ ೬ ॥

ಇಬ್ಬರೂ ಹರೆದವರಕಾಲದಿ ।
ತಬ್ಬಿ ಕೊಂಡಿರ್ಪುದುಮಿದಾರಿಗೆ ।
ಸಬ್ಬವಾಗದು ಜನಗಳೇನಷ್ಟೊಂದು ಮಬ್ಬಿಗರೇ ॥
ಒಬ್ಬಳೇ ಬಂದೊಡನೆಯುಂ ಮೈ ।
ಯುಬ್ಬಿ ಮೈವಳಿ ನಿಂತು ಮುಖಮಂ ।
ಹಬ್ಬಿದಾನಂದದಲಿ ಸೋಲ್ಪಿವ ಜಗ ಸುಧಾರಕನೆ ॥ ೭ ॥

ಹಸಿಬೆಯೊಳು ರುದ್ರಾಕ್ಷಿ ಭಸ್ಮವು ।
ಮೆಸೆವ ಲಿಂಗವುಮಿರ್ಪುದೆಂಬರು ।
ಪುಸಿಯುಮಿನುಡಿಯಿದರೊಳಂ ಬಾಣತಿಯ ಹಸಿ ಕೈಯ್ಯಿ ॥
ಮಿಸುಪಮೆಕ್ಕೆಯ ಬೇರು ಮಾಟದ ।
ರಸಿಕ ಸಾಮಾನುಗಳುಮಿಹವೆಂ।
ದುಸುರಿ ಬಿಡದಂತೊದರಿಕೊಂಡರಸಪ್ರಚಾರಕರು ॥೮॥

ಇತ್ತನಾಸ್ತ್ರೀಯಳಿಗು ತಪ್ಪದೆ ।
ಸುತ್ತುವರಿಯುತಮೆಲೆಗೆ ನೀನುಂ ।
ಕತ್ತಿಗುಂ ಕಡೆಯಾಗಿ ನಡೆವನ ಶಾಸ್ತ್ರವುಂ ಕೇಳಿ ॥
ಮುಕ್ತಳಾಗುವಿಯಾ ಛಿವಾರಿಯೆ ।
ಮತ್ತೆ ನಿನ್ನೊಲು ಕೇಳ್ವುದಕೆ ಯಾ ।
ರತ್ತಬಪ್ಪರು ಪೇಳು ನೀನೇ ಪುಣ್ಯ ಭಾಗಿನಿಯೆ ॥ ೯ ॥

ತಿರುಕಿ ಕೂಳನು ತಿಂದು ಪ್ರತಿದಿನ ।
ಹರಕಿ ಕೋಣನ ತೆರದಿ ಮೆರವೀ ।
ಯುರುಟು ಸಾಧುವಿನಲ್ಲಿಯಾಲಿಸೆ ಲಾಭವೇ ನಿನಗೆ ॥
ಚರಣಮಂ ಪೂಜಿಸುತ ಗಂಡನ ।
ಕರುಣಮಂ ಪಡೆಯುತ್ತ ಮನೆಯೊಳು ।
ಸರಸದಿಂ ಇರುವೆಂದು ಬೆದರಿಸಿ ಬಿಡಿಸಿದರು ಸತಿಯ ॥೧೦ ॥

ಕಡೆಗವೊಂದಿನ ಸಾಧುವಜ್ಜನ ।
ಕಡೆಯರುಸುರಿದರೀ ದುವಾಳ್ತಿಯ ।
ನೊಡಲೊಳಗವುರಿಬಿದ್ದು ಕರಿ ಕರಿ ಹಲ್ಲನುಂ ಕಡಿದು ॥
ಸಿಡುಕಿನಿಂ ಮುಠ್ಠಾಳರೆಲ್ಲರು ।
ಸಿಡಿಲು ಸನ್ಯಾಸಾದಯೆನ್ನಗೆ ।
ಸಡಿಲು ಸನ್ಯಾಸೆಂದು ಜನರೊಳು ಹೆಸರುಮಂ ಕೆಡಿಸಿ ॥ ೧೧ ॥

ಹಾಳು ಮಾಡಿದರಿವರ ಬಿಟ್ಟೊಡೆ ।
ಲೀಲೆಯೊ ಗುರುರುದ್ರ ದೇವರ ।
ಬಾಲನೇ ನಾನಲ್ಲ ವಿರಲೆಂತೆಂದು ತಾಳುತ್ತೆ ॥
ಬಾಲೆಯರ ಜಾಲದಲಿ ಬೀಳುವ ।
ಕೀಳು ಮನದಾ ಯತಿಯೆ ನಾಂ ಮಿಗೆ ।
ಮೇಲಿನಪ್ಸರೆ ಬಂದೊಡುಂ ಬಲುಮೊದ್ದು ಕಳಿಪೆಂದು ॥ ೧೨ ॥

ತಡಿಯ ಮೇಲೆಯೆ ಕುಳಿತು ಕೂಡಿದ ।
ಕಡು ಸುಭಕ್ತರುಗಳ ಸಮಕ್ಷಮ ।
ಮಡಿಚಿ ಬೆರಳನು ಮುಟಗೆಯಂ ಮಾಡುತ್ತೆ ಕೈಯೆತ್ತಿ ॥
ಬಡಿದು ತಡಿಯಂ ಮೂರ್ಮೆ ಪೇಳಿದ ।
ನಡಿಕೆಡದೆಲವೊ ರುದ್ರನೇ ನ ।
ನ್ನಡಿಯನಿವ ನಿಜವೆಂಬೆಯಾದೊಡೆ ಮೂರು ದಿನದಲ್ಲಿ ॥ ೧೩ ॥

ಸತ್ತು ಪೋಗಲಿ ನಿಂದಕರುಮೆಂ ।
ದುತ್ತಮಾಂಗನು ನುಡಿಯೆ ಬಳಿಕಂ ।
ಸತ್ಯನಾ ನುಡಿಪುಂತೆ ವೈರಿಗಳಳಿಯೆ ಗ್ರಾಮದೊಳು ॥
ಅತ್ಯಧಿಕನಿವ ಕಚ್ಚಿಯಂ ಬಿಗಿ ।
ದೊತ್ತಿ ಕಟ್ಟಿದ ಬ್ರಹ್ಮಚಾರಿವ ।
ಚಿತ್ತದಲಿ ಚಿತ್ತಜನ ಬರಗೊಡದೀಶನಿವನೆಂದು ॥ ೧೪ ॥

ಪೊಗಳಿ ಜಗದೊಳುಮಾರಿಗಾದೊಡು ।
ಬೊಗಳಬಾರದು ಜರೆಯಬಾರದು ।
ಬಗೆಯ ಬಾರದುಮೆರಡ ವಂಚಿಸಿ ನುಡಿಯಬಾರದಲಾ ॥
ರಗಳಿಯೆಬ್ಬಿಸಿ ಮಾಜನರೊಡನೆ ।
ಜಗಳಮಂ ಕೈಕೊಂಡುಮವರಂ ।
ಸುಗಿವ ಮತಿಯಂ ಮಾಡಬಾರದುಮೆಂದು ಪೇಳಿದರು ॥ ೧೫ ॥

ಇನ್ನುಮಿೂ ಮಾಹಾತ್ಮ್ಯನೆಸಗಿದ ।
ಚನ್ನವಾದ ಪವಾಡ ಕುಳಮಂ ।
ಮನ್ನಣೆಯಲಿಂ ಬರದಿಡುವೆನುಂ ಭಕ್ತರಾ ಹಿತಕೆ ॥
ಮಾನ್ಯ ಬೆಳವಟಿಗೆಯೊಳಗೊರ್ವೆಯು ।
ಧನ್ಯ ಗುಡಗುಡಿ ಯಲ್ಲಪೆಂಬವ ।
ಸನ್ನುತದ ಮಠಮಂ ರಚಿಸುತಲ್ಲಿಟ್ಟನಜ್ಜನನು ॥ ೧೬ ॥

ಊರೊಳಗಿನೀಸಾಧು ಮಠಕಂ ।
ಸಾರ ಶಾಸ್ತ್ರದ ಶ್ರವಣಕಂ ಬಹು ।
ಹಾರಯಿಸಿ ಜನ ಬಂದುಮಾರಾಜಿಸುವ ಬೋಧೆಯನು ॥
ಆರತಿಯಲಿಂದಾಲಯಿಸಿ ಮನೆ ।
ಮಾರು ಮರೆಯುತ ಕುಳಿತುಮಲ್ಲಿಯೆ ।
ಚಾರು ಜ್ಞಾನದ ಚರ್ಚೆಯಂ ಮಾಡುವರು ಸಂತಸದಿ ॥ ೧೭ ॥

ಗುರುವರನು ಮುಟ್ಟಿರ್ದ ಶರೀರವು ।
ಹರನೆನಿಪುದೀಕ್ಷಿಸಲದು ಪರವು ।
ಮರವೆಯಾ ಹಂಗಿಲ್ಲವದಕಂ ಮೂಲದೇ ಕುರುಹು ॥
ಅರಿವನರಿತೊಡೆಯುರಿವ ಕರ್ಪುರ ।
ಪರಿಯು ತಾನಾಗುತ್ತೆ ನಖ ಶಿಖ ।
ವರೆಗೆ ಪರಬ್ರಹ್ಮದ ಸುತೇಜದಿ ಹೊಳೆವುತಿಹುದೆಂದು ॥ ೧೮ ॥

ಹೂವಿನಿಂ ಫಲ ಜನಿಸಿಯಂತ್ಯಕೆ ।
ಹೂವು ತಾನಿಲ್ಲಾಗಿ ಪೋಗುವ ।
ಧಾ ವಿಮಲ ಸುಜ್ಞಾನವಿಂತುಂ ಜನಿಸೆ ಕರ್ಮವದು ॥
ಸಾವನಪ್ಪುತ್ತಿಹುದುಮದರಿಂ ।
ಕೋವಿದರು ಕರ್ಮಕ್ಕೆ ಬೆಲೆಯಂ ।
ದಾವಸಿ ಮಿಗೆ ಕೊಟ್ಟು ನಲಿವುದು ಕ್ಷೇಮವೆಂತೆಂದು ॥ ೧೯ ॥

ಉಚ್ಚಿಯಾ ಬಚ್ಚಲದ ಕುಣಿಯನು ।
ಮೆಚ್ಚಿ ಬಿದ್ದಿಹ ತುಚ್ಛ ಮನುಜರು ।
ಮೆಚ್ಚರಿಲ್ಲದೆ ಕಚ್ಚಿ ತುಟಿಯಂ ಹುಚ್ಚರಾಗುತ್ತೆ ॥
ಕಚ್ಚಿಹರಕಿಯ ಬಚ್ಚ ದೇಹದ ।
ಲುಚ್ಚ ಸುಖಮಂ ಬಿಟ್ಟುಮರಿವಂ
ಬಿಚ್ಚಿ ತಿಳಿಯದೆ ಬೆಚ್ಚಿ ಬೀಳ್ವರು ರತಿ ಸುಖಕವೆಂದು ॥ ೨೦ ॥

ಇಂತಿರಲು ಮುಂದೊರ್ಮೆಯುಂ ತಾಂ ।
ಸಂತನುಂ ಜಳಕವನು ಮಾಡುತ ।
ನಿಂತಿರೆ ಪ್ರಾಯದವನೊಬ್ಬಯುವಕನು ಸೊಬಗಿಂದೆ ॥
ಸಂತಸದಿ ದಾರಿಯೊಳು ತನ್ನಯ ।
ತಂತಿಯೋಲಿಹ ಮೀಸೆ ತಿರುವುತ
ಚಿಂತೆಯಿಲ್ಲದೆ ಮನೆಗೆ ಪೊರಟಿರ್ಪುದನುಮಿವ ನೋಡಿ ॥ ೨೧ ॥

ಜಳಕಮಾಳ್ಪುವದಂ ವಿಸರ್ಜಿಸಿ ।
ಬಳಿಗೆಯಾತನ ಕರೆದುನುವನಿಗ ।
ಮಳಿವೆ ನೀನಿನ್ನೆರಡು ದಿನದೊಳು ತಿಳಿದು ಕೋಯೆಂದು ॥
ತಿಳುಪಿದನುಮಿದು ಕೇಳಿ ಪ್ರೌಢನು ।
ಮಳುವ ಮುಖಮಂ ಮಾಡಿ ಕೊಂಡಾ ।
ಗಳೆ ವ್ಯಲೀಕವನಾಂತು ಮನದೊಳು ಬೆಚ್ಚಿ ಹೌಹಾರಿ ॥ ೨೨ ॥

ಮನೆಯೊಳೆಲ್ಲರ ಮುಂದುಸುರಿ ಮಾ ।
ಮುನಿಯ ನುಡಿ ಪುಸಿಯಾಗದೆಂಬುತ ।
ಮನದೊಳಗೆ ಮರಮರುಗಿಯತ್ತರು ಬಾಲನಂ ನೋಡಿ ॥
ಜನರುಮೊವಾರ್ತೆಯನುಮಾಲಿಸಿ ।
ಮನೆಯ ಬಿಡಿಸದೆಯೊಳಗಮಿರಿಸಿರಿ ।
ಖಣವುಮಿದ್ದರೆಯುಳಿವನೆಂಬುವ ಧೈರ್ಯಮಂ ತೋರಿ ॥ ೨೩ ॥

ಸಾಗಿ ಪೋದರು ಬಳಿಕ ಮರುದಿನ ।
ಮೇಘವನು ತಲೆದೋರಿ ಹಗಲೊಳು ।
ವೇಗದಿಂ ಮಳೆಸುರಿದು ಮನೆಗಳು ಸೋರ ತೊಡಗಲ್ಕೆ ॥
ಹೇಗನುಂ ಮನೆ ಬಿಟ್ಟು ನೆರಮನೆ ।
ಗಾಗ ಹೊಂಟರೆ ಬಲದ ಬದಿಯಲಿ ।
ನಾಗವೇಣಿಯರಲ್ಲಿ ನಿಂತಿರಲೆಡಕೆ ತಾ ಸರಿದು ॥ ೨೪ ॥

ಅಡಿಯನೊಂದೆರಡಿಟ್ಟು ಸಾಗಿರೆ ।
ಪಿಡಿದ ನೀರಿಂ ದೊಡ್ಡ ಗೋಡೆಯು ।
ಪೊಡನೆ ಬಲು ಕುಸಿಯುತ್ತವೀತನ ಮೇಲೆ ತಾ ಬೀಳೆ ॥
ಬುಡದೊಳೀತನು ಸಿಕ್ಕುಮೇಳದೆ ।
ದಡಿಗಸಿರ್ದೊಡು ಕಸುವು ಮುರಿಯುತ ।
ಕಡವಿಲ್ಲದೆ ಪ್ರಾಣನುಂ ನೆರೆ ಬಿಟ್ಟು ಪೆಣವಾದಂ ॥ ೨೫ ॥

ಓಡಿ ಜನಗಳು ಬಂದುವಲ್ಲಿಗೆ ।
ಕೂಡಿ ಗುದ್ದಲಿ ಸಲಿಕೆಯಿಂದಲಿ ।
ನಾಡೆ ಯೆಳದರು ಸಿಕ್ಕ ಕಡೆಗೆಯೆ ಕಲ್ಲು ಮಣ್ಣುಗಳ ॥
ನೋಡಿದಿವರೊಬ್ಬಿಬ್ಬರಿರ್ದೊಡು ।
ಕಾಡು ಹಾರುತೆ ಬಾಯಿಯಿಂದಲಿ ।
ದೌಡುವೀಕಡೆಗಿದ್ದನೆಂಬುದುಮುಸರಲಿಲ್ಲವರು ॥ ೨೬ ॥

ಸತ್ತ ಪೌರ್ತ್ರನ ಮೇಲೆ ಗಿರಿಯುನಿ ।
ಕಿತ್ತು ಮಣ್ಣಿನ ಕುಟ್ಟರಿಯನುಂ ।
ಸುತ್ತು ನಿಲೆ ಕಡೆಗರಿದು ಕುಟ್ಟರಿ ಜಗ್ಗಿ ಹೊರೆಯಕ್ಕೆ ॥
ಎತ್ತಿ ತೆಗೆದರು ಪೆಣವನಲ್ಲಿಂ ।
ಕೊತ್ತು ಮನೆಯೊಳಗಿಟ್ಟುಮುಂಬೇ ।
ಗೊತ್ತುಪಡಿಸಿವ ಠಾಣದೊಳು ಮಣ್ಗಾಣಿಸಿದರವನ ॥ ೨೭ ॥

ನಿಜವೆಯಾಯಿತು ಸಾಧು ನುಡಿವುದು ।
ಮಜರುಮಿರ್ದೊಡುಮಿಪನ ನುಡಿಯಂ ।
ತಜವಿಜಿಯು ಮಾಡದಲೆ ಕೇಳ್ವರು ನಂಬುಗೆಯುವೆರಿಸಿ ॥
ಭಜಿಪ ಭಕ್ತರ ಭವದ ಬೇರಂ ।
ಗಜದವ್ರೋಲ್ ತುಳಿದಾಡಿ ಕೀಳ್ವುತ ।
ರಜನಿ ವಣ್ಣದ ಮಾಯೆಯಂ ಬಿಡಿಸುವನುಮಾಜನರ ॥ ೨೮ ॥

ಈತನಮೃತವಾಣಿ ಕುಶಲನು ।
ಜ್ಯೋತಿಯಂ ಕಂಡಿರ್ಪ ರಸಿಕನು ।
ಭೂತ ಭೌತಿಕ ಸೃಷ್ಟಿ ಮಿಗೆ ಲೊಳಲೊಟ್ಟೆಯೆಂಬುವನು ॥
ಆತುಮದ ಸುಜ್ಞಾನದಿಂದಲಿ ।
ಪೂತ ತೂರ್ಯಾತೀತನೆನಿಸುತೆ ।
ಕೂತುಮುಣ್ಣುವ ತನ್ನ ಸುಖ ತಾನೆಂದು ಪೊಗಳಿದರು ॥ ೨೯ ॥

ಮಂದರಾದ್ರಿಯ ಕಿತ್ತು ತಂದುಂ ।
ಚಂದದಿಂ ಕಡಗೋಲು ಮಾಡುತ ।
ಮುಂದು ಶೇಷನ ತರಿಸಿ ಗುಣಮಂ ಮಾಡಿಯುದಧಿಯನು ॥
ಅಂದದಿಂ ದೇವತರುಮಸುರರು ।
ಪೊಂದಿ ಬಲು ಕಡಿಯಲ್ಕೆ ಪೊರಟಾ।
ಸಂದ ವಿಷದಲಿ ಕಾಳಕೂಟವ ಕುಡಿದ ಶಿವ ಪೊರೆಗೆ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ ಆಧುನಿಕ ಕವಿವರ್ಯ ಗುಡಿಸಾಗರ ಶ್ರೀಮದ
ತ್ಯಾಶ್ರಮಿಾ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೧೮ ನೇ ಅಧ್ಯಾಯ ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೫೫೧

# ೧೯ ನೇ ಅಧ್ಯಾಯ

ಸೂಚನೆ :

ಪರನು ದೇವಿ ಪುರಾಣ ನಡದಿರೆ ।
ಮರುಳನೊಬ್ಬನು ಪ್ರಶ್ನೆ ಗೈಯಿದ್ದೊ ।
ವರ ವಿಚಾರಿಯ ಕೃಪೆಗೆ ಹೊರತಾಗಳಿದುದಂ ಬರೆವೆ ॥ ಪಲ್ಲ ॥

ಈಗ ಕಲಿಯುಗವೊಳಗವುತ್ತಮ ।
ಯೋಗಿವರ್ಯರುವಾರಿಹದು ಬಹು ।
ಭೋಗಿಗಳೆ ತುಂಬಿಹರುಮೆಂಬುತ ಸಂತರಂ ತ್ಯಜಿಸಿ ॥
ಕಾಗೆಯಾ ಪರಿ ಕಾಕು ಮತಿಯಂ ।
ಬೇಗನೇ ಬೆಳಿಸುತ್ತ ಲೌಕಿಕ ।
ರಾಘವಂ ಸಂಘಟಿಪರಿಂಗಾ ಮುದವನಿಡು ಶಿವನೆ ॥ ೧ ॥

ಸಾಧುಗಳು ಸಂಚಾರ ಮಾಡುತೆ ।
ಮೋದದಿಂ ಸುಕ್ಷೇತ್ರಮೆನಿಸಿದ ।
ಸೇದ್ಯದ ಮುದೇನ ಗುಡಿಯೆಂಬಾ ಪಳ್ಳಿಗೈತಂದು ॥
ವೇದ ವೇದಾಂತವನೆ ಬೀರ್ದಾ ।
ಲ್ಹಾದದಿಂದಿರೆ ಭಕ್ತರದನಾ ।
ಸ್ವಾದವಂ ಮಾಡುತ್ತಮಾಹ್ನಿಕವಂ ಸುಸಾಗಿಸಲು ॥ ೨ ॥

ಇಳ್ಲ ಕೋಣೆಯ ಕಟ್ಟಿಯುದಕಂ ।
ಬಳ್ಲಿದರುಮಾ ಶಿವನ ಜೋಲೆಂ ।
ದುಲ್ಲಸದಿ ನಾಮಿಟ್ಟುಮುದರೊಳು ಸಾಧುವರನಿರಿಸಿ ॥
ಕಿಲ್ಲರಿಯನು ನಿಗುಳ್ಚಿ ಪ್ರತಿದಿನ ।
ಚೆಲ್ವ ಮುನಿಯಂ ನುತಿಸುತಿವನಿಂ ।
ದೆಲ್ಲ ಸಾಧನ ಸಾಧ್ಯಮಂ ಪೊಂದುವರು ಸಂತಸದಿ ॥ ೩ ॥

ಮುಂದೆ ಮಾನಾಮಿ ಬರೆ ಜನಗಳ ।
ವೃಂದವಾನಂದಾಂತು ದೇವಿಯ ।
ಚಂದ ಪೌರಾಣವನು ಪೇಳಿಸಬೇಕುಮೆಂತೆಂದು ॥
ಬಂಧುರದ ಗುಡಿಸಾಗರಜ್ಜಗೆ ।
ಬಂದುವಾಮಂತ್ರಣವನಿತ್ತುಂ ।
ಕುಂದಹವದಿಲ್ಲದಲೆ ಸಡಗರದಿಂದೆ ನಡಸಿದರು ॥ ೪ ॥

ಊರೊಳಗೆ ಜಾಗಟೆಯನುಂ ಬಲು ।
ಬಾರಿಸುತೆ ಗುಡಿಸಾಗರೀಶನು ।
ನಾರಸಿಂಹೆ ಪುರಾಣಮಂ ಬೆಸಸುವನು ಕೇಳ್ವುದಕೆ
ಸಾರ ಭಕುತರು ಬರಲು ಬೇಕೆನೆ ।
ಗೌರವಸ್ಥರು ಕಾಯಿ ಕರ್ಪುರ ।
ಹಾರ ಹೀರಾವಳಿಯಲಿಂದೈತಂದರಲ್ಲಿಂಗೆ ॥ ೫ ॥

ಅಷ್ಟ ವಿಧವಿಂ ಪೂಜೆಯಂ ಮಿಗೆ ।
ಯಷ್ಟಹಾಸದಿಗೈಸಿ ಮುನಿಪಂ ।
ಶ್ರೇಷ್ಠಳಂ ಕೈವಾರಿಪುದಕಾರಂಭಮಂ ಮಾಡಿ ॥
ದುಷ್ಟರಂ ಸಂಹರಿಸಿ ಸೌಖ್ಯದ ।
ಭೆಟ್ಟಿಯಂ ಮಾಡಿಸುದಕೀಕೆಯು ।
ಕಟ್ಟೆ ನಡಮಂ ನಿಂತಿಪಳು ಮಾ ಕಾಣ್ಮೆಯಿಂದೆಂದ ॥ ೬ ॥

ತನ್ನ ಗರ್ಭದಿ ಮೂರು ಲೋಕವ ।
ನಿನ್ನುಧರಿಸುತೆ ಮಾತೆಯೆನಿಪಾ ।
ಚನ್ನ ದೇವಿಯ ಪಾದಮಂ ಸ್ಮರಿಸುತ್ತಲಿಹ ಜನಕೆ ॥
ತನ್ನ ತಾನೇ ಮೋಕ್ಷವುಣ್ಮುತ ।
ಧನ್ಯತೆಯು ಕೈಸಾರ್ದು ಭವದಾ॥
ಬನ್ನಮಂ ಕುಡುತಿರ್ಪ ಮಾಯೆಯು ಬಿಡುವುದೆಂತೆಂದ ॥ ೭ ॥

ಲೇಸು ಸಜ್ಜನ ಸಂಗಮುಂ ಬಹು ॥
ಲೇಸು ನೈಷ್ಠಿಕ ಬ್ರಹ್ಮಚರ್ಯವು ।
ಲೇಸು ಗುರುವಿಂ ಮೋಕ್ಷನುಂ ಗಳಿಸುವದು ಮನುಜಂಗೆ ॥
ಲೇಸುಮಾಸೆಯನುಂ ವಿದಳಿಪುದು ।
ಲೇಸು ಮಿಗೆಯೇಕಾಂತ ವಾಸವು ।
ಲೇಸು ಶಿವಜೀವರ ವಿಭೇದವ ಮುರಿವುದೆಂತೆಂದ ॥ ೮ ॥

ಸಕಲ ಶುಭನುಂ ಕುಡುತೆ ಜನಗಳ ।
ನಿಕರನುಂ ಕಾಪಿಡುತೆ ದಯದಿಂ ।
ದಕುಟಿಲಮುಮಂ ನೀಡಿ ನೆರೆಯುದ್ಧಾರನುಂ ಮಾಳ್ಪ
ಕಕುಲತೆಯ ಮಾದೇವಿಯಿಂ ಸ ।
ಮ್ಮುಖದಿ ಸಂಭಾವಿಸುತೆ ಭಕ್ತರು ।
ಸುಖಿಸ ಬೇಕೆನೆಯುದರೊಳೊಬ್ಬನುಮಜ್ಞಗಿಂತೆಂದ ॥ ೯ ॥

ನೀವು ವಿಧಿಪುದು ಶುದ್ಧ ಸುಳ್ಳೀ ।
ದೇವಿಯಂ ಕಣ್ಣಾರೆ ಕಂಡವ ।
ರೋವಿಯಾಕೆಯಪಾದ ತಲನುಂ ಪೂಜಿಸದುವಾರು ॥
ಆವಿಲ ನಿಶಾಚರರ ಹತಿಯಂ ।
ಕಾವರದಿ ಗೈಯ್ಯುವದು ತಾಯಿಗ ।
ಮೇವಿಸುವದೇಸಾಡಿ ಬಡೆಯುವದೆಲ್ಲ ಬರಿ ಭ್ರಮೆಯು ॥ ೧೦ ॥

ಕೇಳಿಯಜ್ಞನುಮೆದುರು ನುಡಿಯಂ ।
ತಾಳಿ ದೇವಿ ಪುರಾಣನುಂ ತಾಂ ।
ಪೇಳ್ವುದಂ ನಿಲ್ಲಿಸುತ ಗಂಟನು ಕಟ್ಟಿ ಸುಮ್ಮನಿರೆ ॥
ಊಳಿಗರು ಸಿಟ್ಟಾಗಿ ಕೇಳ್ದನ ।
ಕಾಲುನುಂ ಕತ್ತರಿಪೆವೆಂದೆನೆ ।
ತಾಳು ತಾಳಿರಿಯೆಂದುಮಜ್ಞನು ಬಿಡಿಸಿ ಪ್ರತಿನುಡಿದಂ ॥ ೧೧ ॥

ಎಲವೊ ಷಂದನೆ ನಾ'ನ ದಿನಂ ।
ಬೆಳಗಿನಿಂ ಮಧ್ಯಾಹ್ನವರೆಗಂ ।
ನಿಲುವೆ ಜಗಮಂ ಪೊಂದಿ ನೀಂ ಬಳಿಕಾರು ತಾಸಿಂಗೆ ॥
ಅಳಿವೆ ಜೋಜಿಗ ಬೇನೆಯಿಂದಿದು ।
ತಿಳಿಯದು ನಿನಗೆ ತಪ್ಪಲಾರದು ।
ಮುಳುಹಿಕೊಳ್ವರನುಂ ವಿಲೋಕಿಸೆ ಕಾಣೆ ನಾನೆಂದ ॥ ೧೨ ॥

ಮರುದಿನವವನ ದೇಹದೊಳಗಂ ।
ಕೊರಗಣೆಯನಾಂತಿಪ್ಪಯುರಿಯದು ।
ಪರಪಿ ಪಾಸಿಗೆಯೊಳಗುಮುರುಳಾಡುತ್ತೆ ನೆರಳುತ್ತೆ ॥
ಕರಗಳಂ ಮುಗಿಮುಗಿದು ಯತಿಯಂ ।
ಸ್ಮರಿಸೆ ಶ್ವಾಸೋಚ್ಛ್ವಸಮಿತ್ತಂ ।
ಪಿಷಡುತೆ ತಚ್ಛಣದಿಯಾತಂ ಪ್ರಾಣಮಂ ಬಿಟ್ಟಂ ॥ ೧೩ ॥

ಇತ್ತ ಪಿಂದಿನ ರಾತ್ರಿ ಕಟ್ಟಿದ ।
ಸ್ತುತ್ಯ ದೇವಿ ಪುರಾಣಮಂ ಬಿ ।
ಚ್ಚುತ್ತೆ ಪೂಜಾವಿಧಿಗಳಂ ಮಾಡಿಸುತೆ ಪರಮರ್ಷಿ ॥
ಅತ್ಯುಪಥ ಭಕ್ತರ್ಕಳಂ ಮಿಗೆ ।
ತೆತ್ತಿಸುತೆ ಚಾರಿತ್ರ್ಯಯಂ ಸವಿ ।
ತುತ್ತಿನೊಲುಮುಣಬಡಿಸಿವಂ ಸಜ್ಜನರುಮೊಲಿವಂತೆ ॥ ೧೪ ॥

ಇಂತಹ ಪವಾಡಗಳ ಕುಳಮಂ ।
ಸ್ವಂತ ಕಂಡರಿದಂಥ ಭಾವುಕ ।
ರಂತೆವಾಸಿಗಳಾಗಿಯೊತನು ದೇವನೆಂತೆಂದು ॥
ಸಂತುಷದಿ ಬಳಿಸಾರ್ದು ಮನವಂ ।
ಸಂತವಿಸುತಂ ಸತ್ಫಲಮುಮಂ ।
ಷಂತತಂ ಸಲೆ ಪಡೆಯುತಿಹರು ಪ್ರಮಾಣಮಂ ಮೀರಿ ॥ ೧೫ ॥

ಮುಂದಿದೇಗ್ರಾಮದೊಳಗೊರ್ಮೆಯು ।
ಸುಂದರಾಂಗನು ಶಿವನ ಗೋಂಟಂ ।
ಪೊಂದಿ ನಿತ್ಯಂ ಪೊಳ್ತರೆಯೊಳಂ ನಂದೀಕೇಶ್ವರನಂ ।
ನಂದೆಯಂ ಕೊಂಡಾಡುತಿರೆ ಯಾ ।
ಚಂದವಾದಾ ಶಬ್ದಮಂ ಕೇ ।
ಳ್ದಂದು ವರ ವಡ್ಡಟ್ಟ ಫಕ್ಕೀರಪ್ಪನೆಂಬಾತ ॥ ೧೬ ॥

ಉರಿದು ಯತಿಯಂ ತೆಗಳಿ ಯೋಗಿನ ।
ಪರಮ ಸನ್ಯಾಸಿಗಳ ಮುಖಮಂ ।
ಹರುಷದಿಂ ತಾಂ ನೋಡಬಾರದು ಶಬ್ದಮಂ ಸಹಿತ ॥
ಸಿರಿದುಮಾಲಿಸಬಾರದಿವರಂ ।
ಕರೆದು ಕೂರ್ಪಿಸಿ ಪಾದ ಪೂಜಿಸಿ ।
ಶಿರವನುಂ ಚಾಚುತ್ತೆ ನತಿಯಂ ಬಿಡುವುದುಚಿತೆಂದ ॥ ೧೭ ॥

ಇರುಳು ನಾಲ್ಕುಕಮೆರ್ದು ಬಲು ಬಾ ।
ಯ್ದೆರೆದು ವಟವಟ ಪಚ್ಚಿ ಮಂಡುಕ ।
ಸ್ವರದವೊಲು ಮಾಡುತ್ತೆ ನಮ್ಮನು ನಿದ್ದೆಗೆಡಿಸುತ್ತೆ ॥
ಕರುಣಮಂ ನೆರೆ ಬಿಟ್ಟರಾತಿಯ ।
ಪರಿಯುಳಲನುಂ ಪುಟ್ಟಿಸುತ್ತಲಿ ।
ಯಿರುವಕಿಲ್ಲದುಮರವಳಿಯರೆನ್ನಿಪರೆ ಈ ಜಗದಿ ॥ ೧೮ ॥

ದುಡಿದು ತಿಂಬದೆ ತಿರಿಕೆಯನ್ನದ ।
ಬೆಡಗಿನೊಳು ಮಿಗೆ ಸಮಯಮಂ ಕಳೆ ।
ದೊಡೆ ಶಿವಾರಾಧನವಮೆರ್ಚದಿವರಂ ಪಾಕ್ವ ರೌರವದಿ ॥
ಎಡಬಲದ ಮನೆಯರ ವಿಲಗಮಂ ।
ಪೊಡೆದು ಪಾಕದೆ ಕುಕ್ಕುಟಂಗಳ ।
ಟಡನುಡಿಯುವೊಲು ಕೂಗಿಕೊಂಡೊಡೆ ಲಾಭವೇನೆನ್ನೆ ॥ ೧೯ ॥

ಕಡೆಯೊಳೊಂದಿನ ಯತಿಯುಮಾಲಿಸಿ ।
ಬಿಡಚೆಯಾತಗೆ ಬುದ್ಧಿಯಂ ಪೇ ।
ಳ್ದೊಡವ ವಿನಯಮುಮಂ ತೊರೆದು ಕೋಳ್ಗೊಳ್ದದಂ ನೋಡಿ ॥
ಅಡಬೆಯಂ ಕುಲ ಭ್ರಷ್ಟನೀತನು ।
ನಡಿಸುವನುಮೆಂತೆಂದು ಮಿಗೆ ಕುರು ।
ಪಿಡುತೆ ಜನರಂ ಕರಿಸಿ ವಿಧಿಸಿದನೀ ದುರಂತವನು ॥ ೨೦ ॥

ಕೇಳಿ ಜನಗಳು ಫಕ್ಕಿರಪ್ಪಗೆ ।
ಪೇಳಿದರು ಸದ್ಬುದ್ಧಿಯನೆಲವೊ ।
ಹಾಳು ನುಡಿಯಂ ತ್ಯಜಿಸಿ ದೇವನ ಪಾದಮಂ ನುತಿಸೆ॥
ಕೀಳು ಕೃತಿಯಿದುಮೆಂಬೆಯಾದೊಡೆ ।
ಬಾಳುವಿ ವಿಶಾಲಹ ನರಕದೊಳು ।
ಬೀಳುವವು ಪುಳುವಿಂಡು ಬಾಯೊಳು ಮುನಿಯನುಂ ಜರೆಯೆ ॥ ೨೧ ॥

ಪಾರಮಾರ್ಥವನರಿದ ಯೋಗಿಯ ।
ದ್ವಾರಮಂ ಕಾಯುವರು ದೇವ್ತರು ।
ಭೂರಿ ಸುಖಮಂ ಪೊಂದುವರುಮಿವನಿಂದೆ ಮೆಯ್ಯಾಂತು॥
ಧಾರುಣಿಗೆ ಗೋ ಮೇಘ ವೃಕ್ಷವುಪ ।
ಕಾರಿಯೆನಿಪಂತಿರೆ ಗುರುವಿನಂ ।
ದೂರಿಕೊಂಡೊಡೆ ಕಾಗೆಯಂ ನೆರೆ ಮಾಳ್ಪನಾ ಶಿವನು ॥ ೨೨ ॥

ಮುನಿಯ ಪಾದ ಸ್ಪರ್ಶವಾದೊಡ ।
ಮನಘವಾಗ್ವಳು ಗಂಗೆಯುದರಿಂ ।
ಮಣಿಯ ಬೇಕಲ್ಲದಿವನಂ ತಿಟ್ಟೆದೊಡೆ ಸುಖಮಿಲ್ಲ ॥
ಅನಯತೋರ್ದೊಡೆ ಶಿವನೆ ಬೆಂಕೊ ।
ಳ್ದನುಗೆಡಿಸಿ ಕೆಡಪುವನು ನಿನ್ನನು ।
ಸನುಮತಮುಮಂ ಪೊಂದಿ ಬಾಳ್ವುದು ಲೇಸು ತಿಳಿಯಲ್ಕೆ ॥ ೨೩ ॥

ಸ್ವಾರ್ಥಮಂ ಮಿಗೆ ಬಿಟ್ಟು ಶ್ರಮಿಸಂ ।
ಕೀರ್ತಿಯುತ ಸತ್ಪುರುಷನಪ್ಪಂ ।
ಸ್ವಾರ್ಥಮಂ ಸುಪರಾರ್ಥಮಂ ಸಲೆ ಬಯಸೆ ಸಾಮಾನ್ಯ ॥
ಧೂರ್ತಸುರ ಬರಿ ಸ್ವಾರ್ಥಮೋಹಿ ಯು।
ಥಾರ್ಥನಲ್ಲವೆರಡಳಿದಾ ನರ ।
ಮೂರ್ತಿಯಾಗನು ನಾಮವಾನವ ವೃಕ್ಷವಂತಿಹನು ॥ ೨೪ ॥

ಸಾಧು ಜನರಂ ನಿಂದಿಸಿದೊಡಂ ।
ಕಾದಿಹುದನರ್ಥಕುಳ ದೇವನ ।
ಪಾದ ನುತಿಯಂ ಗೈಯ್ಯೆ ತಿಟ್ಟೊಡೆ ನಿನ್ನನುಂ ಬಡೆದು ॥
ಹಾದಿಯೊಳು ಪಾಕುವೆವುಮೆನ್ನಲು ।
ಸಾಧುವರ ನಡುವೆದ್ದು ಮವರಿಗೆ ।
ಬೋಧೆಯಂ ಮಾಡುತ್ತೆ ತಕ್ಷಣ ಬಿಡಿಸಿ ತಾನಾಗ ॥ ೨೫ ॥

ಎಲವೊ ಫಕ್ಕೀರಪ್ಪ ನಿನ್ನಯ ।
ನಿಲವುಮಿಂತುಟುಮೆಂದು ನಾವುಂ ।
ತಿಳಿದುಕೊಂಡೆವುನಾದೊಡಂ ತವ ನಿದ್ದೆಯಂ ಕೆಡಿಪ ॥
ಪೊಲಸು ಗುಣಮಂ ತಾಳಲಾಪೆವು ।
ಗಳ ವಿಷನ ಸಂಧ್ಯಾನ ಗೈದೊಡೆ ।
ಕುಳಿತುವಾಲಿಸಬೇಹುದುಂ ಕುಟ್ವಾನ ಬೇಡೆಂದ ॥ ೨೬ ॥

ನಿನ್ನ ಹಮ್ಮಂ ಕಂಡು ವಿಸ್ಮಯ ।
ವನ್ನು ತಾಳಿಪ್ಪೆನಿದು ಮಿಗೆ ಸರಿ ।
ಭಿನ್ನಿಸದು ಬಹು ಜನ ವಿರೋಧಮುಮಂ ತಳೆಯಬೇಡ ॥
ಉನ್ಮದದಿ ಮೆರೆದೊಡುರಗವು ತಾಂ ।
ಸಣ್ಣಿರುವೆಯಿಂ ಕಡಿಸಿಕೊಳ್ಳುತೆ ।
ಜನ್ಮಮಂ ಬಿಡುತಿಹುದುಮವರೋಲಳಿಯ ಬೇಡೆಂದ ॥ ೨೭ ॥

ಕೆಲೆದುಮಾತನು ಯತಿಯ ಸಂಗಡ ।
ಕಲಹಮಂ ಮಾಡಲ್ಕೆ ಮುನಿಸಿಂ ।
ದಳಿದು ಪೋಗುವೆಯೆನ್ನೊಡನೆ ಕಲಹಾರಮಂ ಮಾಡೆ ॥
ಮಲೆತ ಕೋಣನ ಕಡಿವ ತೆರ ತವ ।
ಕಲೆವರಂ ಕಡಿಕಡಿದು ಚಲ್ವರು ।
ಕಳಿವರಿದು ಪರಿತಪಿಸಿ ಸಾಯುವೆ ತಿಳಿದುಕೋಯೆಂದ ॥ ೨೮ ॥

ಇತ್ತಮೆಲ್ಲಾ ಜನರು ಪೋಗೆ ಏ ।
ಕೆತ್ತು ಬರೆ ಮರಿಗೌಡರಾ ಮುನಿ ।
ದತ್ತಕದ ನ್ಯಾಯದಿ ಕುಹಕಿಯು ಪೊಣರ್ಕೆಯಂ ನಡಿಸೆ ॥
ಪತ್ತು ಮಂದಿ ಲಮಾಣಿ ಜನರಿಂ ।
ಸ್ತುತ್ಯ ಶಿವನಾ ಖೋಲಿ ಮುಂದೆಯೆ ।
ಕುತ್ತಿಗೆಯಿನುಂ ಕಡಿದೆಸೆದರಿಬ್ಭಾಗಮಂ ಮಾಡಿ ॥ ೨೯ ॥

ತಿರುಕನಿರ್ದೊಡು ಬಯಸಿದುದನುಂ ।
ನರರಿಗಿಡುವುತ ದಾತನಾಗಿಹೆ ।
ಪಿರಿದು ಸುಡುಗಾಡವನೆ ನಿನ್ನಯ ನಿಲಯಮಂ ಮಾಡಿ ॥
ಇರುತಲಿರ್ದೊಡುಮಾ ಪವಿತ್ರನು ।
ಕರಿ ಪಿಶಾಚಿಯ ಮಿತ್ರನಿರ್ದೊಡು ।
ವರ ವಿಪಶ್ಚಿತನೆನಿಪ ಶಂಕರ ರಕ್ಷಿಸೆಮ್ಮವನು ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮದ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೧೯ನೇ ಅಧ್ಯಾಯವು ಮುಗಿದುದು ॥

— ಶುಭ : —

ಒಟ್ಟು ನುಡಿಗಳು

# ೨೦ನೇ ಅಧ್ಯಾಯ

ಸೂಚನೆ :

ಬೆಳವಣಿಕಿಯಾ ವೀರಭದ್ರ ವಿ ।
ಮಲ ಮಹಾದೇವರ ಶಿಲೆಯನುಂ ।
ನಿಲಯ ಮಡಿಗೆಯ ವಿಷಯಮಂ ಪೇಳಿದುದನುಂ ಬರೆವೆ ॥ ಪಲ್ಲ.॥

ಮರವೆಯೆಂಬುದು ಹರಿದ ಮಾತ್ರದಿ ।
ಹರನೆಯಾಗುವನೆಂದು ವೇದವು ।
ಸರುತವಣಿಯಿಂದುಸುದುತಿಪ್ಪದುಮಿದರ ನಿಶ್ಚಯಕೆ ॥
ತುರಿತದಿಂ ಗುರುಮುಖದಿ ಕೇಳಲ್ ।
ಸರಸಮೊಪ್ಪಿಗೆ ಕೊಟ್ಟರದರಿಂ ।
ದರಿದ ಮಾತ್ರದಿ ನೀನೆ ನಾನೆಂದೆರಗುವೆನು ಶಿವನೆ ॥ ೧ ॥

ಕಾಸು ಪರರಿಗೆ ಕುಡುದೆ ದುಡ್ಡಿನ ।
ರಾಶಿಯಂ ಬಹು ಗಳಿಸಿ ಸತಿಗಂ ।
ತೋಸಿದವಲಕ್ಕಿಯನು ತಿನಿಸುತ ತೃಪ್ತಿಯಂ ಪಡಿಸಿ ॥
ಲೇಸು ಹೊಲ್ಲಗಳರಿಯದಾಕೆಯ ।
ಭಾಷಣವ ಕೇಳುತ್ತಮಲೆಯುವ ।
ಹೇಸಿಗಳಿಗುಂ ಶಿವನೆ ಕುಡು ನಿಜವಾದ ಸೌಖ್ಯವನು ॥೨॥

ಬೆಳವಣಿಕೆಯೊಳು ಭಕ್ತರೆಲ್ಲರು ।
ಮಿಲಿತರಾಗುತೆ ತಮ್ಮಮ್ರೂರೊಳು ।
ಚಲುವ ಮಹಾ ವೀರಭದ್ರನ ಮೂರ್ತಿಯಂ ಹೊಡಿಸಿ ॥
ನಿಲಿಸಿ ಗುಡಿಯಂ ಕಟ್ಟಿಯದಕಂ ।
ಕಳಸಮಂ ಮಿಗೆ ಮಾಡಿಸುತ್ತ ವಿ ।
ಮಲ ಮಹಾಸ್ವಾಮಿಗಳ ಕರದಿಂ ಸ್ಥಾಪನಂಗೈಸಿ ॥ ೩ ॥

ವರವರುಷ ಜಾತ್ರೆಯನು ಮಾಳ್ಪವ ।
ಹರುಷ ವಾಳ್ತಿಯ ನುಡಿದುಮಾಗಳೆ ।
ಮೆರೆವ ಸೆಲ್ಲೀಕೇರಿಯಿಂ ಚಲು ಶಿಲೆಯನುಂ ತರಿಸಿ ।
ಸರಸ ಮೂರ್ತಿಯ ಹೊಡಿಸಲಿಕ್ಕಂ ।
ಕರಸಿದರುವೊಕ್ಕುಂದದಿಂದಲಿ ।
ಪಿರಿಯನಾದಾ ವೀರಭದ್ರಪನೆಂಬ ಜಾಣನನು ॥ ೪ ॥

ಅವನು ಬಹು ಬುದ್ಧಿಗಳ ತೊಡಕಿಸಿ ।
ಜವದೊಳಂ ಸುಂದರದ ಮೂರ್ತಿಯ ।
ನವಗಡೆನಿಸದೆ ಕಟೆದು ಮಾ ಪ್ರಖ್ಯಾತಿಯಂ ಪಡೆದು॥
ಅವಗತಿಯ ಹಂಕಾರದೋಳಿರೆ ।
ಪ್ರವಿಣನಾದಜ್ಜೆತ್ತಲಿಂದಲೊ ।
ಸವುಸವದೊಳೈತಂದು ಮೂರ್ತಿಯ ಕಳೆಯನುಂ ಕಂಡು ॥ ೫ ॥

ಪೊಗಳಿ ಸುತ್ತಲು ತಿರುತಿರುಗಿ ನೋ ।
ಡಗಲಳತೆಯಂ ಮಾಡಿ ಮನದೊಳು ।
ಬಗೆದನಿವನೇ ಪಿಂದಿನಾ ಮಿಗೆ ಜಕ್ಕಣಾಚಾರ್ಯ॥
ಜಗದ ಶಿಲ್ಪಿಗರೊಳಗಮಿಂಥಹ ।
ಮಿಗಿಲು ಶಿಲ್ಪಿಗರಿಲ್ಲವಾದೊಡು ।
ನಗುತಮುಸುರಿದನೊಂದು ದೋಷವ ವೀರಭದ್ರಪಗೆ ॥ ೬ ॥

ಕೇಳಿ ಮುಖಮುಂ ತಗ್ಗಿಸುತಮುವ ।
ಪೇಳಬೇಕೈ ದೇವ ಬೇಗನೆ ।
ಮೇಳಮಾಳ್ಪೆನು ತಿದ್ದಿ ದೋಷವ ತೋರಿಸೆಂತೆಂದು ॥
ಕಾಲುಮಂ ಪಿಡಿದುರುಳೆ ಯತಿವರ ।
ಬೋಳಯಿಸಿ ತೋರಿದನು ಕಲ್ಲಿನ ।
ಮೇಲಿನಾ ಸುಳಿ ಕೆಳಗೆ ಕೆಳ ಸುಳಿ ಮೇಲೆಯಾದುದನು ॥ ೭ ॥

ಒಳಗೊಳಗೆ ಕುಪಿತಾದ ವೀರನು ।
ಸುಳಿಯನುಂ ಬಲು ನೋಡಿ ಮನದೊಳು।
ತಿಳಿದುವೊಪ್ಪುತೆ ಸಾಧುವರನಂ ಬಣ್ಣಿಸಿದನಿಂತು ॥
ಒಲೆದು ಸಾಲೆಯ ಕಲಿಯದಿರ್ದೊಡು ।
ನಲಿವ ಬ್ರಹ್ಮಗೆ ಬುದ್ಧಿ ಪೇಳುವ ।
ಪಲವು ಯುಕುತಿಯ ತಂತ್ರಗಾರನು ನೀನೆಯೆಂತೆಂದು ॥ ೮ ॥

ಎಲ್ಲ ವಿಷಯವ ಬಲ್ಲ ಗುರು ನೀ ।
ಸ್ಖಲಿತ ಸುಖಭೋಗ ಯೋಗಗ ।
ಇಲ್ಲಿ ಸುರಿತು ಪ್ರಪಂಚವನು ಮಿಗೆ ಪಾರಮಾರ್ಥವನು ।।
ಒಕ್ಕೆತನದಿಂ ನಡಿಸಿ ಮರ್ತ್ಯಾದಿ ।
ಕಿಳ್ಳಡಿಯನಿವನೆಂದು ಪೆಸರಂ ।
ಗೊಳ್ಳುತೀ ನರ ಜಾಲಮುಂ ಪೊರೆಯುತ್ತಲಿಹೆಯೆಂದು ॥ ೯ ॥

ಸುತರ ಪಡಿಯುಲಿಬೇಕು ಸುಂದರ ।
ಸತಿಯನಾಳಲಿಬೇಕುಮೆಲ್ಲರು ।
ಸ್ತುತಿಯ ಮಾಡಲಿಬೇಕುಮೆನ್ನಯ ನುಡಿಗೆ ಹೌದೆಂದು ।।
ಅತಿಶಯಂದಿ ಸನ್ಮಾನ್ಯವಿತ್ತೊಡೆ ।
ಗತಿಯುಮೆಂಬುವ ಪೆಂಕುಳಿಕಗಂ ।
ಮತಿಯನುಂ ನೀನಿತ್ತು ದೇವರ ಮಾಳ್ಪೆಯೆಂತೆಂದು ॥ ೧೦ ॥

ಅವನೇ ನಾನಂವೆನೆಂದೊಡು ।
ಮೆಡುಮಾತ್ಮಗಳಾಗುತಿಪ್ಪವು ।
ಹುರಿವ ಆತ್ಮನನುಹಿಸಿಕೊಳ್ವಾತ್ಮೆಂದು ತಾಂ ಬಿಡದೆ ॥
ಉರಿವ ದೀಪವು ಬೇರೆ ದೀಪವ ।
ಬರೆಯುಪೇಕ್ಷಿಸದಿರುವ ತೆರ ನೀ।
ಮೆರೆವನೊಂದನೆ ತಿಳುಪಿ ಹರನಂ ಮಾಳ್ಪೆ ಈಗೆಂದು ॥ ೧೧ ॥

ಘಟದ ಬುದ್ಧಿಗು ಘಟದ ಅರ್ಥಕು ।
ದಿಟದ ದೃಷ್ಟ್ಯವು ಬೇರೆಯಿರ್ಪಂ ।
ತಟದ ಹಂಬುದ್ಧಿಗುಮಹಂಪ್ರತ್ಯಯಕೆ ಗೋಚರಿಪ ॥
ಸಟಿಯ ದುಃಖಕು ಬೇರೆ ದೃಷ್ಟ್ಯವು ।
ಪ್ರುಟದು ನಿಂತಿರೆ ನಾಶವಾಗುವ ।
ಕುಟಿಲ ಮಾತೇಕೆಂದು ಧೈರ್ಯವ ತುಂಬುತಿಹೆಯೆಂದು ॥ ೧೨ ॥

ಇದಕಮಿನ್ನೇನೆಸಗಬೇಕೆಂ ।
ದದವಳಲ ತಾನಾಂತು ಕೇಳಲು ।
ಮುದದಿ ಕೆಲ ಮಂತ್ರಂಗಳಂ ವಿಧಿಸಿದನು ಗುರುರಾಯ ॥
ಎದೆಯೊಡೆದು ನೀರಾದ ವೀರನು ।
ಮೃದುಲ ಭಕ್ತರ ಕರಿಸಿ ಮಂತ್ರದಿ ।
ನುದಯಕಾಲದಿ ಶಾಂತಿಯಂ ಮಾಡಿಸಿದನಾ ಬಳಿಕ ॥ ೧೩ ॥

ಇದರ ನೆನಪಿಗೆ ನಿನಗವೊಂದುಂ ।
ಸದಮಳದ ಪ್ರೇಕ್ಷಕರ ಮನಮಂ ।
ಮುದದಿ ಜಗ್ಗುವಯುಂಗುರೊಂದುಂ ಕುಡುವೆನೆಂತೆಂದು ॥
ಪದುಗಿ ಹವಳದಿ ಶಿವನ ಕೊರೆದುಂ ।
ಪದೆಪಿ ಸ್ವರ್ಣದಿ ಕೂಡ್ರಿಸಿ ಯತಿಯ ।
ಮೃದುಲ ಬೆರಳೊಳಗಿಟ್ಟು ಕಳುಪಿದ ವೀರಭದ್ರಪನು ॥ ೧೪

ಇಂತು ಲೀಲಾಲೋಲನಾಗಳ್ ।
ಸಂತುಷದಿಯಾವೂರನುಳಿದುಂ ।
ಸಂತರಂ ಪುಡುಕುತ್ತಮೈದನುಮುತ್ತರಾ ದಿಶೆಗೆ ॥
ಸ್ವಂತಮುಲೆಯುತ್ತಿರುವವೀತನು ।
ಕಂತೆಯಂ ಬೊಂದಿಂಗೆ ಧರಿಸುತ ।
ಚಿಂತೆಯಂ ನೆರೆ ಬಿಟ್ಟಿರುವನೇಕಾಂಗಿ ತಾನಾಗಿ ॥ ೧೫

...ಯು ಟೊಪ್ಪಿಗೆ ತಲೆಗೆ ಕರದೊಳು ।
...ನ ಮುಸಾಳದ ಬಡಿಗೆ ಪೂಜೆಗೆ ।
...ಸಿದ ಸಾಮಾನುಮಿಡುವ ಕಲೂತಿ ಪಾದಕ್ಕೆ ॥
...ಣಿಸಿಪ ಕಟ್ಟಿಗೆಯ ಪಾದುಕೆ ।
...ಲವಿಕೆಯಿಂ ಧರಿಸಿ ನಡೆಯುತ ।
...ನ ನಿವಾರಣ ಮಾಳ್ಪ ಯತಿಗಿನ್ನಾರು ಸರಿ ಜಗದಿ ॥ ೧೬ ॥

ಹೋದ ಹೋದಲ್ಲೆಲ್ಲ ಭಕ್ತರು ।
ಮಾದರದಿ ಬರಮಾಡಿಕೊಂಡಿ ।
ಸಾಧುವರನಿಗವಮುಣಿಸಿ ಕೇಳ್ವರು ತಮ್ಮ ಸುಖದುಃಖ ॥
ಹೇ ದಯಾನಿಧೆ ನಿನ್ನಿನಿಂದಲಿ ।
ಗೋದಲಿಯೊಳಿರಿಸಿರ್ದ ದಂಟಾ ।
ಸ್ವಾದಿಸದೆ ದನ ಬಿದ್ದು ಕೊಂಡಿವೆಯೆಂದು ಕೆಲರುಸುರೇ ॥ ೧೭ ॥

...ಸು ಬಾಲರ ಜ್ವರವುಮಾರದೆ ।
...ಲುಕುತಿಪ್ಪರು ಹಸಿವೆಯಾಗದೆ ।
...ತು ಮಲಿನದ ಕಮರು ಡೇಗದು ಹಾಯ್ದು ಬಳಲುವರು ॥
...ಯುದವ ಪಥ್ಯೆಯನು ಮಾಡುತೆ ।
...ಳೆಯುತಿಪ್ಪರು ಗುಲ್ಮ ರೋಗದಿ ।
...ಣಿಯ ಮುದುಕರು ಹೊಟ್ಟೆ ಕಡಿತದಿ ಸಾಯ್ವರೆಂದೆನ್ನೆ ॥ ೧೮ ॥

ಪಲವು ನಿಷ್ಕಾಮಿಗಳು ನಮಗೀ ।
ಜಲುಮ ಸಾಕಾಗಿಹುದು ಮೋಕ್ಷದ ।
ತಿಳವಳಿಕೆಯಂ ಕೊಟ್ಟು ಸಂಸೃತಿ ಸುಟ್ಟು ನಿನ್ನೊಳಗೆ ॥
ನಿಲಪೆಯ್ಕೈಕ್ಯವ ಮಾಡಿಕೊಳ್ಳುತೆ ।
ಬೆಳಗಿದಾದರ್ಶದೊಲು ಜಗಜಗ ।
ಪೊಳೆವ ಪರಿ ಮಾಡೆಂದು ಸೂಳಯಿಸುತ್ತ ಬೇಡಿಕೊಳೆ ॥ ೧೯ ॥

ಎಲ್ಲರಿಗು ಸನ್ಮಾನ್ಯ ಮಾಡುತೆ ।
ಬಲ್ಲ ಗುರುವಂತಃಕರುಣದಿಂ ।
ಸಲ್ಲಲಿತದಿಂ ಕಾಯ್ದಿರಿಸಿದಾ ರಾಮ ನಾಣ್ಯವನು ॥
ಒಳ್ಳೆ ಜಲದಿಂ ತೊಳೆದು ರೋಗಿಗೆ ।
ಲಲ್ಲೆಯಿಂ ಕುಡಿಸುತ್ತೆ ಗದವುಂ ॥
ಗೆಲ್ಲಿಸುತಮಾಸ್ಫೀತರಂ ಮಾಡುವನು ಸಂತತವು ॥ ೨೦ ॥

ಜನುಮ ಸಾಕೆಂದುಲಿದ ಜನರಿಗೆ ।
ಘನದಪೇಕ್ಷೆಯ ನೋಡಿ ತಕ್ಷಣ ।
ಪ್ರಣುತವಾದಾ ರಾಮ ತತ್ತ್ವವನವರ ಮನಸಿಂಗೆ ॥
ಮನನವಾಗುವ ತೆರದಿ ಮತ್ತೆಯು ।
ತನು ವಿಚಾರದ ಸಂಸ್ಕರಣಮಂ ।
ಸನುಮತದಿ ತಿಳುಪಿದನು ಪಂಚೀಕರಣಮಂ ಮಾಡಿ ॥ ೨೧ ॥

ಮರಳಿ ಮತ್ತೊರ್ಮೆ ಬೆಳವಣಿಕಿಗೆ ।
ಬರೆ ವಿಬುಧನುಂ ಭಕ್ತ ಗಡಣವು ।
ನೆರೆದು ಮಿಗೆ ಸಂಚಾರದಾಸುದ್ದಿಯದು ಕೇಳುತ್ತೆ ॥
ಪಿರಿದು ನಂಬಿಗೆವೆರಿಸಿಯಜ್ಜನು ।
ಮಿರುವಸ್ಥಳವುಂ ಸ್ವಚ್ಛಗೊಳಿಸುತೆ ।
ಪೊರೆಯುತಿರ್ದರು ತಾಯಿ ಬಳಿಯಾ ಕೂಸಿನಂದದಲಿ ॥ ೨೨ ॥

ಇಲ್ಲಿ ಮಾಹಾಭಕ್ತನೆನಿಸಿದ ।
ಯೊಳ್ಳೆ ಧನಿಕನುಮುಳಗವಾಡಿಯ ।
ಮಲ್ಲಣಿಲ್ಲದ ಬಸವರಡ್ಡೆಂಬವನು ತನ್ಮನೆಯ ॥
ಚಲ್ವ ಭಾವಣಿಗೆಂದು ಮಡಗಿಯ ।
ನಲ್ಲಿ ಮಾಡಿಸಿಕೊಂಡು ಕುಳಿತಿರೆ ।
ಘುಲ್ಲಶರನರಿಯುದನುಮೀಕ್ಷಿಸಿ ಬಸವನಂ ಕರೆದು ॥ ೨೩ ॥

..ಲಿಸಿ ಪೇಳಿದ ನಿನ್ನ ಮಡಿಗಿಗೆ ।
..ಬಲವದಿಲ್ಲವು ನೋಡಿದಡೆ ನೀಂ ।
..ಶೆಯ ಮಡಿಗೆಯ ಮಾಡಿಸಿಟ್ಟೊಡು ಲಾಭವಿನಿತಿಲ್ಲ ॥
..ಲುವ ಗ್ರಹಗಳುಮಸ್ತಮಿರ್ಪವು ।
..ಶೊಲೆಯುಲಾರಳುಮುದಕೆ ಲಕ್ಷ್ಮಿ ಪ್ರಿಯು ।
..ತಲೆ ತಲಾಂತರ ಬಿಡದು ಬಡತನ ತಿಳಿದುಕೋಯೆಂದ ॥ ೨೪ ॥

ಕೆಟ್ಟ ಮೂರ್ತದಿ ಕಟ್ಟಿಗೆಯ ತಂ ।
ದಿಟ್ಟುಕೊಂಡಿಹೆ ಶನಿಯು ಕೆಂಪಿನ ।
ಬಟ್ಟೆಯಂ ಮಿಗೆ ತೊಟ್ಟು ನಿನಗೆದುರಾಗಿ ನಿಂತಾಗ್ಗೆ ॥
ಅಟ್ಟಹಾಸದಿವೂರ ಬಿಡುವುತ ।
ನೆಟ್ಟಗೈದೆಯು ಶಾಂತಿ ಪಡಿಸದೆ ।
ಧಿಟ್ಟನದರಿಂ ಮುನಿದು ಕಾಡುವ ತಿಳಿದುಕೋಯೆಂದ ॥ ೨೫ ॥

ಆಗ ಬಸವನುಮಿವರು ಮಾಹಾ ।
ಯೋಗಿಗಳು ವಾಕ್ಸಿದ್ಧಿ ಪುರುಷರು ।
ಮಾಗುಹೋಗರಿವ ತ್ರಿಕಾಲದಶ್ರೇಷ್ಠ ಜ್ಞಾನಿಗಳು ॥
ಈಗಿವರ ಮಾರ್ಮಿಕದ ನುಡಿಯಂ ।
ಬೀಗಿಯಿರ್ದೊಡೆ ನನಗನಿಷ್ಟತೆ ।
ಕಾಗುವದುಮೆಂತೆಂದು ಮನದೊಳು ನಿಶ್ಚಯಂ ಮಾಡಿ ॥ ೨೬ ॥

ಸಾರ ಯೋಗಿಗೆ ಬಾಗಿ ದೇವನೆ ।
ಬೇರೆ ಮಡಗಿಯ ಮಾಡಿಸಿಡುವೆಂ ।
ವಾರ ತಿಥಿ ಮೂಹೂರ್ತಗಳ ನೀಂ ಬೆಸಿಸಬೇಕೆಂದು ॥
ಏಡಲಿಕ್ಕುತೆ ಯತಿಯ ಕೂಡ್ರಿಸಿ ।
ಯಾರಯಿಸಿಯುವವಿಧಿಸಿದುದನುಂ ।
ಚಾರು ಕಾಗನದೊಳಗೆ ಬರೆಸುತಮಿಟ್ಟುಕೊಳ್ಳುತ್ತೆ ॥ ೨೭ ॥

ಸತ್ಯನಿಗೆ ನಾಳಿಂದೆ ಕಟ್ಟಿಗಿ ।
ಮತ್ತೆ ತರುವೆಂದೆನ್ನೆಯಾತನು ।
ಬಿತ್ತರಿಸಿದಂ ಮುಂದೊದಗುವಾ ಪಲವು ವಿಷಯಗಳ ॥
ಕತ್ತವಾದೀ ಮಡಿಗೆ ಹೇರ್ದೊಡೆ ।
ಕುತ್ತು ಕೊರತೆಗಳಿಲ್ಲವಡಗುತೆ ।
ನಿತ್ಯವಾದಾ ಗರ್ಭ ಶ್ರೀಮಂತತೆಯು ಬಹುದೆಂದ ॥ ೨೮ ॥

ಮುನಿಯ ನುಡಿಯಂ ನಂಬಿ ಬಸವನು ।
ನುಣುಪಿನಾ ಹೊಸಮಡಿಗೆ ಮಾಡಿಸಿ ।
ಕುಣಿದು ಹೇರಿಸಿ ಬಿಟ್ಟನುಂ ಕಟ್ಟಸಿದ ಛಾವಣಿಗೆ ॥
ಕೊನೆಯವರೆಗೀ ಸಾವುಕಾರಕಿ ।
ಮನೆಯ ಬಿಡದೆಂದರಿದುವಿೂತನು ।
ಮನದಿ ವಿಶ್ವಯಗೊಂಡು ಖುಷಿಯಿಂದಿದ್ದನೂರಿನೊಳು ॥ ೨೯ ॥

ಅಸ್ತಿ ಭಾತಿ ಪ್ರಿಯದ ಲಕ್ಷಣ ।
ಸಿಸ್ತಿನಿಂದಲಿ ತೋರಿಯೆನ್ನಂ ।
ವಸ್ತು ಮಾಡಿದ ಹರನೆ ನಿನ್ನುಪಕಾರಮಂ ಸ್ಮರಿಸಿ ॥
ಬಸ್ತಿಯಾ ಹಂಗವನೆ ಹರಿಯುತ ।
ವಸ್ತಿಮಾಳ್ಪೆನು ನಿನ್ನ ಬಳಿಗೆಯು ।
ತಸ್ತಿ ಮಾಡದೆ ಕರೆದುಕೋ ತವ ಬಾಲನಾದೆನ್ನ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ ಆಧುನಿಕ ಕವಿವರ್ಯ ಗುಡಿಸಾಗರ ಶ್ರೀಮದ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೨೦ ನೇ ಅಧ್ಯಾಯ ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೬೧೧

## ೨೧ ನೇ ಅಧ್ಯಾಯ

**ಸೂಚನೆ :**

ಎಸೆವ ಗುಡಿಸಾಗರ ಕುಲಕರಣಿ ।
ಬಸನಗೌಡರ ಮತ್ತೆ ಲೋಲೆರ ।
ವಿಷಯಮಂ ನಾನೆತ್ತಿ ಬರೆಯುವೆ ಸರ್ವರಾ ಹಿತಕೆ ॥ ಪಲ್ಲ ॥

ಹೀನ ವಿಷಯದಿ ಲೀನವಾಗದ ।
ಮಾನವನು ತಾಂ ಜ್ಞಾನವಂತನು ।
ಹೀನ ವಿಷಯಕ್ಕೊಲಿವ ನರನೇ ಶುದ್ಧ ಪಾಮರನು ॥
ಕ್ಷೋಣಿಯೊಳಗೀ ವಾರ್ತೆಯರಿವುತ ।
ಮೇನನೊಂದಿಚ್ಛಿಸದೆ ತವ ಪದ ।
ಕಾನತನು ನಾನಪ್ಪೆನದರಿಂ ರಕ್ಷಿಸುಮಾರಮಣ ॥ ೧ ॥

ಹೆಣ್ಣು ಕೆಟ್ಟವು ಮಣ್ಣು ಕೆಟ್ಟೆಂ ।
ದೆನ್ನುತಂ ಬಹು ದೂರ ಮಠಮಂ ।
ಕಣ್ಣಿಗಾನಂದಾಗುವಂದದಿ ಕಟ್ಟಿಕೊಳ್ಳುತ್ತೆ ॥
ಅನ್ನ ಮಾಳ್ಪವರಿಲ್ಲವೆಂದು ಸು ।
ಕನ್ನೆಯರ ಶರಣೆಯರ ಮಾಡುತೆ ।
ಯಿನ್ನು ಬೆರೆವರು ಸ್ವಾಮಿಯೆಂಬಗು ಸುಖವ ಕುಡು ದೇವ ॥ ೨ ॥

ನಿತ್ಯ ಗುಡಿಸಾಗರದ ಮಠದೊಳು ।
ಭಕ್ತರಂ ಸಂಗೊಳಿಸಿಯಜ್ಜನು ।
ಬಿತ್ತರಿಸಿದಂ ಜ್ಞಾನ ಶಾಸ್ತ್ರವನಸಮ ಭಾವದೊಳು ॥
ಕೃತ್ತಿವಾಸನು ಯಾರು ನೀವೇ ।
ಗೊತ್ತುಪಡಿಸಿರಿ ಬೇರೆ ದೇವರ ।
ಪೊತ್ತು ಮಿಗೆ ವೇಮಾರ್ದು ಪೂಜಿಸಿ ಕೆಡುವದೇಕೆಂದು ॥ ೩ ॥

ಬೆಳ್ಳಿ ಗಣಪತಿ ಮಾಡಿಯದನನು।
ಮೊಳ್ಳಿದೇವರುವೆಂದು ಪೂಜಿಸಿ ।
ಅಳ್ಳು ತಂಬಿಟ್ಟುಂಡಿಯಡಿಯಂ ತಾಟೆನೊಳು ತಂದು ॥
ಬಳ್ಳು ತೋರಿಸಿ ಹೊಳ್ಳ ತಾವೇ ।
ಬಳ್ಳು ನಿಲ್ಕುವವೋಲು ತಿಂದುಂ ।
ಸುಳ್ಳಿ ಪೂಜೆಯಗೈದಿವೆಂಬರಿಗಿಲ್ಲ ಸುಖವೆಂದು ॥ ೪ ॥

ಮನವ ದೆತ್ತಲುಪೋದರೇನ್ನೈ ।
ತನುವು ತಾನೇನಾದರೇನ್ನೈ ।
ಘನವ ತನ್ನೊಳು ತಿಳಿದ ಮುಕ್ತಗೆ ಮರಣದಂಜೇನು ॥
ಹೆಣದವೋಲ್ ತಾನಾಗಿ ಮನಸಿನ ।
ಕೊನೆಯೊಳಿಹ ಮಾದೇವನಂ ತಿಳಿ ।
ದನುಪಮುದರುವುಮಾದಗಾಂಜೇನುಮೆಂತೆಂದು ॥ ೫ ॥

ಏಕಮೇವಾದ್ವಿತಿಯವೆಂಬಾ ।
ವಾಕ್ಯ ಸಾರುವದಂ ವಿಚಾರಿಸಿ ।
ಕಾಕು ಭೇದಕೆ ಸಂದು ಕುಡುದೇ ಜೋಕೆಯಿಂದಿರುತೆ ।
ಲೋಕಧೀಶನೆ ನಾನು ನನ್ನೊಳು ।
ಲೋಕ ಕಲ್ಪಿತಗೊಂಡು ನಿಂತಿರ ।
ಲೇಕೆ ಬೇಕೀಮಾಯೆಯೆಂಬುತ ನೂಂಕುವನುಮೆಂದು ॥ ೬ ॥

ಮುದದಿಯದುಯಿದುಬೇಕುಮೆಂಬುವ ।
ಹುದುಲುಮಂ ಮಿಗೆ ತೊಳೆದು ಸವಮಲ ॥
ಹೃದಯುದೊಳಗೊಂದಾಗಿ ನಿಂತಿಪ ಜೀವ ಶಿವರುಗಳ ।
ಹದವನರಿದವ ಕ್ರೂರ ಸಂಸೃತಿ ॥
ಯೊಡೆದು ಜ್ಞಾನಾಮೃತವ ಸೇವಿಸಿ ।
ತುದಿಗೆ ಜೀವನ್ಮುಕ್ತನಾಗುವ ಗುರುವೆಯುವನೆಂದು ॥ ೭ ॥

ಒಡವೆ ಕೊಟ್ಟೊಡೆ ಮಡದಿ ಕಡಬಿನ ।
ಹೆಡಿಗೆಯಂ ತಂದಿಡುವಳೆದುರಿಗೆ ॥
ಯೊಡವೆ ಕುಡುವಿರೆ ಕಡಿವ ನಾಯಿಸುಹಾಂಗೆಯೊದರುವಳು ।
ಬಿಡದೆ ರೊಕ್ಕವ ತಂದು ಕೈಗಿಡೆ ।
ಹಿಡಿಯು ಸಕ್ಕರಿ ತಿನಿಸುತಿಪ್ಪಳು ।
ಕುಡದಿರಲು ಬಿಕ್ಕೆಯುವನೆಂಬಳ ಸಂಗ ಬಿಡಿರೆಂದು ॥ ೮ ॥

ವಾಲಿ ಬುಗುಡಿಯನಿಟ್ಟು ಸುಂದರ ।
ಬಾಲೆ ಸೀರೆಯುನುಟ್ಟು ವನಪಂ ।
ಬಾಳ ಮಾಳ್ಪತೆ ಪತಿಯ ಪೆಸರೊಡಪಿಟ್ಟು ವಿಧಿಸುತ್ತೆ ॥
ಹಾಲು ಬೋನವನುಂಡು ಕುಳಿತಿರೆ ।
ಸಾಲಗಾರರು ಬಂದು ಗಂಡನ ।
ಕಾಲಿಲೊದೆಯುಲುವೋಡುವಳಿವಳ ಸಂಗ ಬೇಡೆಂದು ॥ ೯ ॥

ತಂದೆ ತಾಯ್ಗಳು ಬಂದು ಬಾಂಧವ ।
ರಿಂದುಮಿವರಾರಾರು ನೀಂ ಮಿಗೆ ।
ಪೊಂದದೀ ಕಕುಲಾತಿಯಂ ತೊರೆ ವಿಗಡ ಭವದೊಳಗೆ ॥
ಅಂದದಾ ಗುರುಪಾದ ಸೇವೆಯ ।
ಬಂಧುರದಿ ಮಾಡುತ್ತೆ ಜನ್ಮದ ।
ಬಂಧನವ ನೀಂ ಕಳೆದುಕೋ ಸುಖಿಯಪ್ಪೆಯೆಂತೆಂದು ॥ ೧೦ ॥

ಆಗವೂರೊಳುಯೆಮ್ಮೆ ಮಾರುವ ।
ವಾಗಿಯೊಬ್ಬನು ಸಾಗಿ ಬಂದುಂ ।
ಬೇಗ ಪೇಳಿದ ಕುಡುವೆನಿದನನುಮುಗ್ಗ ಧಾರಣಿಗೆ ॥
ಲೋಗರೆಲ್ಲರು ಕೂಡಿ ಚೌಕಸಿ ।
ತೂಗಿ ಮಾಡುತೆ ನಿಲ್ಲಲಾಕ್ಷಣ ।
ರಾಗದಿಂ ಕುಲಕರ್ಣಿ ಬಸವನಗೌಡ ತಾಂ ಬಂದು ॥ ೧೧ ॥

ಅಜ್ಜನನು ನಾಂ ಕೇಳಿಕೊಳ್ಳುವೆ ।
ಸಜ್ಜು ಮಾಡುವೆನಾಗ ರೊಕ್ಕವ ।
ನೊಜ್ಜೆಯಾದೊಡುಮಾಜ್ಞೆಯಾದರೆ ಕೊಳ್ಳುತಿಹೆನೆಂದು ॥
ಕಜ್ಜವಮಂ ಬದಿಗಿಟ್ಟು ವೇಗದಿ ।
ಕಜ್ಜೆಯಂ ಹಾಕುತ್ತೆ ಯತಿವರ ।
ನುಜ್ಜಳದ ತಾಣಕ್ಕೆ ಬಂದುತ್ಕಲಿಕೆಯಂ ಪೊಂದಿ ॥ ೧೩ ॥

ನಮಿಸಿ ಕೇಳಿದನಾಗ ಗುರುವೇ ।
ನಮಗವಿೂಗೊಂದೆಮ್ಮೆ ಸೋವೀ ।
ಸಮನಿಪುದು ತಮ್ಮಪ್ಪಣೆಯುಮಾದೊಡೆಯು ಕೊಳ್ವೆನ್ನೆ ॥
ಚಮತುಮವನಿಗೆ ಹಾಂಗೆ ಕೊಟ್ಟೊಡು ।
ಮಮರಬೇಡ್ವೆಯದನು ಕೊಂಡವ ।
ಯಮಪುರವ ಸೇರುವನುಮೆಂದನು ಮೂರುತಿಂಗಳಿಗೆ ॥ ೧೩ ॥

ಮುಂದೆಯಿೂತನು ಬಿಟ್ಟು ಬಿಡುತಿರ ।
ಲಂದು ಗೊಬ್ಬರ ಗುಂಪಿಯಿಂದಲಿ ।
ಬಂದುಮೊಬ್ಬ ಖರೀದಿ ಮಾಡಿದನಾ ಉಲಾಯಿಯನು ॥
ತಂದುಮಂದು ಮನೆಯೊಳು ಕಟ್ಟಿ ಹೈನವ ।
ಚಂದದಿಂದುಣ್ಣುತ್ತಲಿರೆ ಬಹು ।
ಮಂದಿ ನೋಡುತ್ತಿದ್ದ ಮಾಸದಿ ತೀರಿಕೊಂಡನಲಾ ॥ ೧೪ ॥

ಇವನು ತೀರಿದ ಸುದ್ದಿಯಂ ಗುರು ।
ತವಸಿಯೆದರೊಳುಮುಸುರೆಯಾತನು ।
ತವೆ ಮಹಿಷಿಯಂ ಕಟ್ಟಿಕೊಂಡವ ಬ್ರಹ್ಮಸಿದ್ಧೊಡೆಯು ॥
ಶವವೆಯಾಗ್ವನು ಮೂರು ತಿಂಗಳಿ ।
ಗಿವನಳಿವುದೇನರಿದುಮೆಂವೆನೆ ।
ಕವಿದ ಜನವಾಲಿಸುತೆ ನೀ ಶಿವನೆಂದು ಪೊಗಳಿದರು ॥ ೧೫ ॥

ಮತ್ತೆಯುಸುರುವೆ ನೀ ಮಹಾತ್ಮನ ।
ಸತ್ಯ ಲೀಲೆಯನಿವನುಮೊರ್ಮೆಯು ।
ಕೃತ್ತಿವಾಸನ ಪೂಜೆ ಮುಗಿಸುತಮೂಟಮಂ ಮಾಡಿ ॥
ಪೊತ್ತು ಹಸಿಬೆಯ ಬೆಳವಣಿಕೆಯಿಂ ।
ದುತ್ತಮದ ನರಗುಂದ ಗ್ರಾಮಕೆ ।
ಪೊತ್ತು ಮುಳುಗುವದರೊಳು ಸೇರುವ ಬಯಕೆಯಂ ಗೈದು ॥ ೧೬ ॥

ಮಿಸುಪ ಯತಿವರನಂದು ಪೊರಟನು ।
ದಿಶೆಯೊಳಗೆ ಸರ್ವರಿಗೆ ಲಕ್ಷಣ ।
ಋಷಿವೆರಿಸಿ ಬಿತ್ತರಿಪಯಿೂತನು ಮುಂದೆ ದಿಶೆಗೆಡುತೆ ॥
ಸಸಿಬ ಪುರುಷನ ಚೇಷ್ಟೆಯಂ ಸಲೆ ।
ಹಸನವಿಲ್ಲದ ಮನದಳಲುಮಂ ।
ಮಿಸುಕದನುಕರಿಸುತ್ತೆ ನಾಡೆ ಗತಾರ್ಥಮಂ ಪೊಂದಿ ॥ ೧೭ ॥

ದಾರಿಯೊಳು ಜನ ನೋಡಿಯೆಲ್ಲಿಗ ।
ಮಾ ರಭಸದಿಂ ಪೊರಟಿರುವೆಯೆಂ ।
ದಾರಯಿಸಿದರುಮೊಂದು ಸೀತರು ಬಕ್ಕದಲೆಯಿಂದೆ ॥
ಕ್ರೂರ ಹಲ್ಲಿಯು ಕಂಟಿಯೊಳಗಂ ।
ಸಾರಿ ಲೊಚಲೊಚ ನುಡಿಯಿತಾಗಳ್ ।
ತೋರಿಸಿತು ಪೊಲಿ ಕಾಗಿಯೆಡಕೆಯು ಹಾರಿ ವಿಘ್ನವನು ॥ ೧೮ ॥

ಆದೊಡಂ ಕಣ್ಮುಚ್ಚಿಯಜ್ಜನು ।
ಮೋದದಿಂ ಮುಂದಕ್ಕೆ ಬರುತಿರೆ ।
ಪಾದಿ ಬಡೆವಾ ಮೂರು ಜನ ಲೋಲೇರಿವನ ಕಂಡು ॥
ಓದನವನಾಲಿಸುವ ನೆಪದಿಂ ।
ಬೀದಿಯುಲಿ ತರುಬಿದರು ಕ್ರೋಧದಿ ।
ಬೈದರಲ್ಲಿಂ ಹಸುಬೆಯಂ ಪಿಡಿದೆಳೆದು ಜಗ್ಗುತ್ತೆ ॥ ೧೯ ॥

ಯಾರು ನೀನಿದರೊಳಗಿಹುದು ಭಂ ।
ಗಾರವೋ ಬಹು ದುಡ್ಡು ಮಿಹುದೋ ।
ಗಾರುಪಡಿಸದೆ ಸುಮ್ಮನೇಯಿದ್ದುದನು ಕುಡುಯೆಂದು ॥
ಜೋರಿನಿಂ ಕಸಗೊಂಡು ಹಸುಬೆಯ ।
ನಾರವಮುಮಂ ಮಾಡಿ ಕೇಳುತ ।
ಮೂರು ತಲೆ ಕೈ ಬಾಯುುವಂತೆಯುು ಬಡಿದರಜ್ಜನನು ॥ ೨೦ ॥

ಎಚ್ಚರಿಲ್ಲದೆ ನೆಲದಿ ಬೀಳಲು ।
ರೊಚ್ಚಿಗೆದ್ದಾ ದಾರಿ ಬಡಕರು ।
ಬಿಚ್ಚಿ ಹಸ.ಬೆಯ ನೋಡಲದರೊಳು ದಮಡಿ ಸಹಿತಿಲ್ಲ ॥
ಪಚ್ಚಕರ್ಪುರ ಗಂಟೆಯಕ್ಷತೆ ।
ಮುಚ್ಚಿದಾ ಡಬ್ಬಿಗಳ ಕಂಡುಂ '
ಚಚ್ಚರದಿಯೋಡಿದರುಮಿೊತನು ಸತ್ತನೆಂತೆಂದು ॥ ೨೧ ॥

ಎಷ್ಟೋ ಪೊತ್ತಿನ ಮೇಲೆಯಚ್ಚರ ।
ಪಟ್ಟ ಯತಿವರನಾಗ ಹಸುಬೆಯ ।
ನಿಟ್ಟಿಸಿದನುಂ ದೂರ ಬಿದ್ದುದ ಮನದಿ ಮರಗುತ್ತೆ ॥
ದುಷ್ಟರೇ ಶಿವಪೂಜೆ ಹಸುಬೆಯು ।
ಮುಟ್ಟಿ ಕೆಡಿಸಿದಿರೆಂದ ಬಳಿಕಾ ।
ಸುಟ್ಟು ಪೋಗಿರಿ ಮೂರುದಿನಕೆಂತೆಂದು ಶಪಿಸಿದನು ॥ ೨೨ ॥

ನನ್ನನಷ್ಟೇ ಬಡಿಯೆ ಕೇವಲ ।
ವಿನ್ನು ಕೋಪವದಿಲ್ಲವಾದೊಡು ।
ಸನ್ನುತ ಶಿವಾಧವನ ಪೂಜೆಯ ವಸ್ತುಗಳ ಕೆಡಿಸಿ ॥
ಅನ್ಯಯವ ಮಾಡಿದರುಮಿವರಂ ।
ಚೊಣ್ಣದರಸಿಲೆ ಸುಡುವ ರುದ್ರನು ।
ಕಣ್ಣು ಕಾಣುವದೆಲ್ಲರಿಗುಮಿದು ಸತ್ಯ ಸತ್ಯೆಂದ ॥ ೨೩ ॥

ನಂತರಂ ಮೂರ್ದಿನಕೆ ಲೋಲೆರ ।
ಸಂತತಿಯು ಸೆರೆ ಕುಡಿದು ತಮ್ಮಯ ।
ಸ್ವಂತ ಕಟ್ಟಿದ ಗುಡಿಸಲಲ್ಲಿಯೆ ದೀಪವಂ ತಡಿವಿ ॥
ದಂತವಂ ತೆಗೆತೆಗೆದು ನಗುವಿಯೊ ।
ಇಂತುಸುರಿಯದನೊಡ್ಡು ಕೆಡವಲ್ ।
ಪಿಂತಿನಿಂ ಬಿದ್ದೆಣ್ಣೆಯಿಂದುರಿಹತ್ತಿ ಸತ್ತರಲಾ ॥ ೨೪ ॥

...ರುದಿನವೆ ನರಗುಂದದೊಳಗಂ ।
...ರೆಯ ಹತ್ತಿರವಿದ್ದ ಲೋಲೆರ ।
...ಯ ಗುಡಿಸಲು ಭಸ್ಮವಾಗುತಮವರ ಮೂರ್ಜನರು ॥
...ರಣವಾದರು ಸುಟ್ಟುವೆಂದುಂ ।
...ದಿರುವ ಪೇಪರವ ನೋಡುತ ।
...ರುಪಿದರು ಕೆಲಜನರುಮಾಗಳ್ ಯತಿಯು ಖುಷಿಯಿಂದೆ ॥ ೨೫ ॥

ದುಷ್ಟರಂ ಸಂಹರಿಸಿ ಕೇವಲ ।
ಶಿಷ್ಟರಂ ಪೊರೆಯುವದು ಸಂತತ ।
ದಿಟ್ಟ ಮೂರುಳ್ಳವನ ಕಾಯಕ ತಪ್ಪದಿದುಮೆಂದು ॥
ಧಿಟ್ಟ ರಾವಣ ಕೆಟ್ಟ ಕೌರವ ।
ಪೆಟ್ಟು ತಿಂದುಪಮೆಯನು ಕುಡುವುತೆ ।
ಭ್ರಷ್ಟರಿಗೆ ಸಲೆ ತಕ್ಕ ಪ್ರಾಯಶ್ಚಿತ್ತ ಲೇಸೆಂದ ॥ ೨೬ ॥

...ರುಳಿಹೋಳಿಗಿ ಪಾಲು ಸಕ್ಕರಿ ।
...ರುತ ಮನೆಯೊಳು ಮೆಲ್ದು ಕುಳಿತೊಡು ।
...ರಣರೊಣರೊಟ್ಟೆಯನುಮಾಲಿಸೆಯಿನಿತು ನೀಡಿಸದೆ ॥
...ರಳಿ ಕಳುಪುವ ಬೈದು ಬಡಿವಂ ।
...ರನುಮೊಕ್ಕೃತಿ ನೋಡಿ ಧನಿಕಗೆ ।
...ರಸ ಬಡತನ ಶಿಕ್ಷೆಯಂ ಕುಡುತಿಹುದು ಲೇಸೆಂದ ॥ ೨೭ ॥

ನೆಚ್ಚಿದಾ ಸತಿ ಸೇವೆಗೈದೊಡು ।
ಕುಚ್ಚಿದಾ ರೊಟ್ಟಿಯನು ತಿನಿಸುವ ।
ಹೆಚ್ಚಿಗೊಂದುಂ ಬಿಟ್ಟುಡಲು ಸೀರೆಯನು ತರದಿರುವ ॥
ಮೆಚ್ಚಿ ಕಾಳನು ಕುಟ್ಟಿ ಕೂಲಿಯ ।
ನಿಚ್ಚಳದಿ ಕುಡೆ ರೊಕ್ಕ ಕಟ್ಟುವ ।
ನಿಚ್ಚ ರೊಟ್ಟಿಯನೆಣಿಸಿ ತಿನಿಸವ ಸಾಯ್ವುದುಚಿತೆಂದ ॥ ೨೮ ॥

ಎರಳೆ ನೋಟದ ತರುಣಿ ಮುಖಮಂ ।
ಮರುಳುಗೊಂಡಾ ಮನುಜ ನೋಡುತ ।
ಹೊರಳಿ ಬಾರದವಸ್ಥೆಯಲಿ ತಾಂ ಬಿದ್ದು ಕೊಂಡಿಹುದ ॥
ದುಡುಳ ಕಾಮನು ನೋಡಿ ನಗುವುತ ।
ಮರಳಸರಳಿಂ ಪೊಡೆದು ಕೆಡಹುವ ।
ನಿರದಿವಗೆ ಬಿದ್ದವನು ಮಿಗೆ ಷಂಡೆನಿಪನೆಂತೆಂದ ॥ ೨೯ ॥

ಹಳ್ಳಿ ಹುಂಬರ ಪಿಡಿದುಮವರಿಗೆ ।
ಪಲ್ಲೆ ಪಚ್ಚಡಿ ತಿನಿಸಿ ಬಳಿಕಂ ।
ಮಳ್ಳು ಮಾಡುತಮಿವರ ಬಲಮಂ ಕಟ್ಟಿ ಕೊಳ್ಳುತ್ತ ॥
ಎಳ್ಳನಿತು ಸುಜ್ಞಾನವಿಲ್ಲದೆ ।
ಬಲ್ಲವರ ಗದ್ದುಗೆಯಸೇರುವ ।
ಖುಲ್ಲ ಹವ್ಯಾಸಿಗರ ಸಂಗವ ಬಿಡಿಸಿ ಪೊರೆ ಶಿವನೆ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ ಆಧುನಿಕ ಕವಿವರ್ಯ ಗುಡಿಸಾಗರ ಶ್ರೀಮಧ
ಶ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೨೧ ನೇ ಅಧ್ಯಾಯ ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೬೪೧

## ೨೨ ನೇ ಅಧ್ಯಾಯ

ಸೂಚನೆ :

ಜರಠೆಯೋರ್ವಳು ಕೈಗಡಕತನ ।
ವರಿಯದೆಸಗಿದ ಮತ್ತೆ ಗಂಡಗೆ ।
ವಿರಸ ವಿಷಮಂ ತಿನಿಸಿದುದು ನಾಂ ಬರೆವೆನಿದರೊಳಗೆ ॥ ಪಲ್ಲ ॥

ಕಲ್ಲಲಿಟ್ಟಾ ಸಾಂಖ್ಯತೊಂಡನ ।
ಬಿಲ್ಲಿನಲಿ ಹೊಯ್ದಾ ಸುಪಾರ್ಥನ ।
ನಿಲ್ಲದೆಡಬಲ ಕಾಲಿನಿಂದಲಿಯೊದ್ದ ಕಣ್ಣಪನ ॥
ಎಲ್ಲರಿವರವಗುಣವನೆಣಿಸದೆ ।
ಸಲ್ಲಿಸಿದಿ ನಿಜವಾದ ಮುಕ್ತಿಯ ।
ನಿಲ್ಲಿ ನಿನ್ನೊಡ ಸೆಣಸದೆನ್ನನು ರಕ್ಷಿಸೈ ಸಾಂಬ ॥ ೧ ॥

ಏನಸೋ ಬೂಟಾಟಿಕೆಯ ನುಡಿ ।
ಸಾನುರಾಗದಿ ಪೇಳಿ ನಮ್ಮೊ ।
ರಾನುಭವಿಗಳ ತಲೆಯ ಕೆಡಿಸುತ ತನ್ನವೋಲ್ ಮಾಡಿ ॥
ವೈನದಾದೊಂದು ಮಠಮಂ ನಿ ।
ರ್ಮಾಣ ಮಾಡಿಸಿಕೊಂಡುಮಲ್ಲಿಯೆ ।
ಹೇನಮಂ ನೋಡುತ್ತಲಿಹನೆಂಬವನ ಶಿವ ಪೊರೆಗು ॥ ೨ ॥

ತಗಲ ಸಂಸಾರವನುಮೆಲ್ಲವ ।
ನುಗುಳುದೊಂಬಲದಂತೆ ಮಾಡುತ ।
ಜಿಗಿದು ಪೋದರು ಶರಣರೆಲ್ಲರು ಗುರುವಿನಾ ಬಳಿಗೆ ॥
ನುಗಿಸಿಯಾಲಸ್ಯವನು ಮಂದತೆ ।
ತೆಗೆದು ಸೇವೆಯ ಮಾಡುತಂ ಚಿ ।
ದ್ಗಗನವೆನಿಸಿದ ವಸ್ತುವಂ ತಿಳಿಯುವದು ತಾನುಚಿತ ॥ ೩ ॥

ಬರಲೆ ಬೇಕಾಗಿರುವ ಸ್ಥಳಕೆಯು
ತುರಿತದಿಂದ್ವೈತಂದು ಮುಟ್ಟಿದೆ ।
ವರಿಯೆ ಸಿಗಬೇಕಾದುದಂ ಮಿಗೆ ಸಿಕ್ಕಿತೆಂತೆಂದು ॥
ಹರುಷದಿಂ ಕೈಬಿಗಿಯ ಬಿಟ್ಟೊಡೆ ।
ಧರೆ ಸುಧಾರಣೆಯಾಗದದರಿಂ ।
ದರಿತವರು ನಡವಳಿಯ ಮೀರದೆ ವರ್ತಿಪುದುಮುಚಿತ ॥ ೪ ॥

ಗಟ್ಟಿ ಬಡ್ಡಿಗಳಲ್ಲಿ ಸೇರಿದ ।
ಧಿಟ್ಟ ಗುಂಗೀಹುಳವು ಮುಖದಿಂ ।
ತಟ್ಟಿಯದನುಂ ಕೊರೆದು ಪುಡಿಪುಡಿ ಮಾಡಿ ಹೊರಬಂದು ॥
ನೆಟ್ಟಗೇ ಅಲೆಯುವದುಮಾದೊಡು ।
ಶ್ರೇಷ್ಠ ಹೂವ ಪರಾಗದಾಸೆಗೆ ।
ಕೆಟ್ಟು ಸಾಯ್ವುದು ಜೀವ ನಿಂತೆಂಬುವದು ತಾನುಚಿತ ॥ ೫ ॥

ಅಜ್ಜನೊಮ್ಮೆಯು ರೋಣದೊಳಗಿರೆ ।
ಸಜ್ಜನನೆನಿಪ ಭಕ್ತನೋರ್ವನು ।
ಸಜ್ಜುಗೊಳಿಸಿದ ಕಾಯಿ ಕರ್ಪುರದಿಂದೆ ಬಂದೆರಗಿ ॥
ತಜ್ಞನ ಕೂಡೆರಡು ಮಾತನು ।.
ಮುಜ್ವಲದ ಮನದಿಂದೆ ನುಡಿಯುತ ।;
ಬಿಜ್ಜಲದಿ ತಾಂ ಪೊರಟನುಂ ತನ್ನೂರುನುಂ ಕುರಿತು ॥ ೬ ॥

ಹರಿದ ಕಿಸೆಯೊಳಗಿದ್ದ ಪಾಕಿಟು ।
ಜರಿದುಮಲ್ಲಿಯೆ ಬೀಳೆಯದನುಂ ।
ತಿರುಗಿ ನೋಡದೆ ಪೋದನಾ ಬಂದಿರ್ದ ಶಿವಭಕ್ತ ॥
ವರ ಮಠದ ಕಸತೆಗೆವನುಲ್ಲಿಯು ।
ಜರತೆಗದು ನೆರೆ ದೊರೆಯೆ ತನ್ಮನಿ ।
ಗರವರಿಸುತದನೊಯ್ದು ಮಡಕಲಗಡಿಗೆಯೋಳಿಟ್ಟು ॥ ೭ ॥

ಅರ ಮುಂದೆಯುಮುಸುರದಂತೆಯು ।
ವೂರಿಸೋಳಿರಲಿತ್ತ ಭಕ್ತನು ।
ದಾರಿಯೊಳು ಕೈಯಿಕ್ಕಿ ಕಿಸೆಯಂ ನೋಡಿಕೊಳ್ಳಲ್ಕೆ ॥
ನೂರು ರೂಪಾಯಿಗಳ ಪಾಕಿಟು ।
ಜಾರಿ ಮಠದೊಳು ಬಿದ್ದೆದೆಂಬುತ ।
ಜೋರಿನಿಂದೋಡೋಡಿಬಂದನುಮಜ್ಞನಾ ಬಳಿಗೆ ॥ ೮ ॥

ಉಸುರಿದನು ಗುರುದೇವ ನನ್ನಯ ।
ಕಿಸೆಯೊಳಗಿನಾ ಪಾಕಿಟಲ್ಲಿಯೆ ।
ರಸೆಯೊಳಗೆ ಬಿದ್ದಿಪುದುಮಿಲ್ಲಿಯ ಜನರ ಕೇಳೆಂದ ॥
ರಸಿಕನಾಗಳೆ ಕರಿಸಿ ಮುದುಕಿಯ ।
ಖುಷಿಯಲಿಂ ಪಾಕೀಟು ಕೇಳಿದ ।
ಬಸಿದ ಮುಖನಿಂದಿಲ್ಲ ನಾನೋಡಿಲ್ಲವೆಂತೆಂದಳ್ ॥ ೯ ॥

ಸುಳ್ಳು ಪೇಳಲು ಬೇಡ ನಿನ್ನಯ ।
ಕಳ್ಳತನಮಂ ಹೊರಗೆಡವಿ ಜಗ ।
ದಲ್ಲಿ ಖೊಟ್ಟಿಯ ಮಾಡಿ ಬಿಡುವೆಂ ನೋಡುಮೆಚ್ಚರಿಕೆ ॥
ಎಳ್ಳನಿತು ಪರವಸ್ತು ತಿಳಿಯದೆ ।
ಸಲ್ಲಲಿತದಿಂ ನಡೆದೆಯಾದೊಡೆ ।
ಚಲ್ಲುವನು ಪರಮಾತ್ಮ ಮೋಕ್ಷವ ನಿನ್ನ ಬಾಗಲಕೆ ॥ ೧೦ ॥

ವೇದ ಶೃತಿಗಳು ಪರರ ವಸ್ತುವ ।
ಮೋದದಿಂ ಭಯ ಬಿಟ್ಟು ಪಿಡಿವನೊ ।
ಆ ದುರಾತ್ಮನ ಕೈಯ್ಯ ಕಾಲನು ಮುರಿದು ನರಕದೊಳು ॥
ಈ ದಿವಾಕರನಿರುವವರೆಗುಂ ।
ಬಾಧೆ ಪಡಿಸುತಮುಳಿಸಿಮಾಸ್ಥಿರ ।
ವಾದ ಬ್ರಹ್ಮವ ತೋರಗೊಡರೆಂತೆಂದು ಪೇಳುವವು ॥ ೧೧ ॥

ಸುಳ್ಳು ಪೇಳ್ವರ ಜಿಹ್ವೆ ಕೀಳ್ವರು ॥
ಕಳ್ಳರಾಸ್ತಿಕಣ್ಮೆಟಿ ಬಿಡುವರು ।
ಮುಳ್ಳಿನಾ ಹೆಟ್ಟದಲಿ ಚಲ್ವರು ಕೊಲ್ವ ಕುಹಕಿಗಳ ॥
ಮಳ್ಳ ಸ್ತ್ರೀಸಂಗಿಗಳ ಮೂಗಿನ ।
ಹೊಳ್ಳಿಯಂ ಕುಯ್ಯುವರು ಬಟ್ಟೆಯ ।
ಕಳ್ಳು ಕುಡಿವರ ಮುಖದಿ ಸುಣ್ಣವ ಸುರಿವರೆಂಬುವವು ॥ ೧ ॥

ಸುಮ್ಮನೇ ತಂದುಕೊಡುಮಿಲ್ಲನ ।
ಲುಮ್ಮಳವು ಬಂದಪುದುಮೆಂದೊಡು ।
ಮುಮ್ಮಬಾಯ್ಬಡಿದಿಲ್ಲ ತಕ್ಕೊಂಡೆವರ ಕರ ಸೇದಿ॥
ನಿಮ್ಮ ಮುಂದೆಯು ಸತ್ತು ಪೋಗಲಿ ।
ನೆಮ್ಮಿ ಯೊನುಡಿ ನುಡಿಯಲಜ್ಜನು ।
ಧಮ್ಮಿಲಳಿಗಂ ನಿಮ್ಮವಡಕಲಗಡಿಗೆಯೊಳಗಿಟ್ಟು ॥ ೧೩ ॥

ಬಾಯಿಯಂ ಸಲೆ ಮುಚ್ಚಿ ನಮಗೆ ಪ್ರ ।
ಮೇಯಮಂ ತಂದಿಕ್ಕಿಯೂರೊಳು ।
ಬಾಯಿ ಮೇಲೆಯು ಬಡಿಸುವಾಕೃತಿಯೆಸಗಿಯಿಲ್ಲೆಂಬೆ ॥
ಆಯತಿಯಲಿಂ ಬೇಗ ತಂದಿಡು ।
ಸಾಯಬಡೆವೆನುಮಿಲ್ಲವೆನೆ ನಿ ।
ರ್ಮಾಯನಿಂತುಸುರಿದೊಡೆ ಭೀತಿಸಿ ಕೊಟ್ಟಳಾ ಜರಠೆ ॥ ೧೪ ॥

ರೊಕ್ಕಮಂ ಕಳಕೊಂಡ ಪುರುಷಗೆ ।
ತಕ್ಕೊ ನಿನ್ನಯ ನೂರು ರೂಪ್ಯಕ ।
ಲೆಕ್ಕ ಮಾಡಿಕೊ ಜತನದಿಂದಿಟ್ಟುಕೊಳುಮೆಂದುಸುರಿ ॥
ಅಕ್ಕರದಿ ಕಳುಪಿದನು ಬಳಿಕಂ ।
ಫಕ್ಕದೊಳಗಂ ನಿಂತ ಜರಠೆಯ ।
ಪಕ್ಕೆಗೊದೆಯುತ ಬೈಯ್ದು ಕಳುಪಿದನವಳನುಂ ಮನೆಗೆ ॥ ೧೫ ॥

ಇಂತುಮಡಕಲಗಡಗಿಯೊಳಗ ।
ತ್ಯಂತ ಗುಪ್ತದಿಯಿಟ್ಟ ವಸ್ತುವ ।
ಸಂತನರಿತಂ ತನ್ನ ಪ್ರಣಿಧಾ ಶಕ್ತಿಯಿಂದಾಗ ॥
ಅಂತ ಪಾರಿಲ್ಲದ ಸದಾತ್ಮನ,
ಚಿಂತೆ ಸಂಬಂಧಿಸಿದವಿೂತಗ।
ಮಂತರಿಸದಾ ವಸ್ತುವರಿಕೆಯು ಲಭಿಪುದೇನರಿದು ॥ ೧೬ ॥

...ಸುರದ ಲಿಂಗದಿರವಂ ಜನ ।
...ಸಿಗೆಲ್ಲಕಮರುಹಿಯುವರಂ ।
...ಸಿ ಮಾಳ್ಪಾ ಮಾಯೆಯನುಮಿಕ್ಕರಿಸಿ ಭವಬಾಧೆ ॥
...ಶಮಾಡುತ ದೇವರೆನ್ನಿಪ ।
...ಶಿಕೋತ್ತಮನಾದ ಗುರುವಿಗೆ ।
...ಸದಿಂ ಮುಚ್ಚಿಟ್ಟ ವಸ್ತುವನರಿವುದೇನರಿದು ॥ ೧೭ ॥

ಅರವಿನಾಲಯ ತೆರವು ಮಾಡುತ ।
ವಿರತಿ ಸಾರಣಿ ಮಾಡಿ ಭಕ್ತಿಯ ।
ಸರಸ ಬಣ್ಣವ ಬಳಿದು ಬಿನ್ನಾಯಕ್ಕೆ ಸದ್ಗುರುವ ॥
ಕರಿಸಿ ಮನ ಮಠಪತಿಯಲಿಂದಂ ।
ತ್ವರದಿ ತೀರಿಸಿ ಶುದ್ಧಗೊಳಿಸಿದ ।
ಪರಮ ಮುನಿಗಳು ನರರ ದುರ್ಗುಣವರಿವುದೇನರಿದು ॥ ೧೮ ॥

...ಾಯಕಾಲದಿ ಮದುವೆಯಾಗುತ ।
...ಾಯೆಯಂ ಕರ ತಂದುಮವಳೊಡ ।
...ಾಯಿಹಾಂಗವೆ ಬೆನ್ನು ಹತ್ತುತಮಲೆಯುತಿರ್ದೊಡೆಯು ॥
...ಾಯಮಂ ಸನ್ಯಾಸಿ ಮಾಡಿ ಸು ।
...ಾಯ ಬ್ರಹ್ಮಜ್ಞಾನ ಬೋಗಳುವ ।
...ೇಯರಂ ಮುರಿದಿಟ್ಟ ಗುರುವಿದನರಿವುದೇನರಿದು ॥ ೧೯ ॥

ನಷ್ಟನುಂ ತಾಂ ಕಡಿದು ಬಂದುಂ ।
ಕಷ್ಟಮಂ ಬಲು ಪಟ್ಟೆನೆಂಬುತ ।
ಬುಟ್ಟಿ ರೊಟ್ಟಿಯ ತಿಂದು ತನ್ನಯ ಕಟ್ಟೆಮೇಲ್ ಕುಳಿತು ॥
ಕೊಟ್ಟ ಸಾಲಾ ಮುಟ್ಟಸಿಡೆನೆಂ।
ದುಟ್ಟ ಕಲಗಿ ತುರಾಯಿ ಪದಮುಂ ।
ಕಟ್ಟೆಪಾಡ್ವರ ಬಿಟ್ಟ ಗುರುವಿದನರಿವುದೇನರಿದು ॥ ೨೦ ॥

ಬಿಡುವೆನಿಲ್ಲಿಗಮಿದನುಮಮ್ಮಿನ ।
ಗಡಕಮೊಮ್ಮೆಯುಗ್ಗೈದ ಸಮಯದಿ ।
ಸಡಗರದಿ ತಾಂ ಯಂತ್ರತಂತ್ರೌಷಧವ ಕುಡುವಾಗ ॥
ದುಡುಕಿಯೊಬ್ಬಳು ಬಂದು ಯತಿಯೇ ।
ಕೆಡಕುಮಾನರಿಸಿಹುದು ಹಿರಿಯಗೆ ।
ಕಡೆಗೆ ಮಾಡೆಂದೆರಗಿ ಬಿನ್ನೈಸಿದಳು ಬಹುವಾಗಿ ॥ ೨೧ ॥

ಕೂಡಿದಾ ಜನರೆದುರು ಯತಿ ಬೈ ।
ದಾಡಿಯಾಕೆಯು ಮಾಡಿದಾ ಕೃತಿ ।
ಯಾಡಿದಂ ಬಿಡದೆಲೆಗೆ ನೀಚಳೆ ಗಂಡನಿಗೆ ನೀನು ॥
ಪೀಡಿಸುವನೆಂದರಿದು ನಾಯಿಯು ।
ಕಾಡ ಪುಡಿಯಂ ಪಾಕಿಯುಳಿಸೆಂ ।
ದೋಡಿ ಬಂದಿಯೆ ನಡೆ ಛಿಮಾರಿಯೆ ತೋರದಿರು ಮುಖವ ॥ ೨೨ ॥

ಗಂಡನಂ ಮಾದೇವನೆಂಬುತ ।
ಮಂಡಲದಿ ಪದ ಪೂಜೆಗೈದಾ ।
ಹೆಂಡರುಂ ಸಂಪಾದಿಸಿದರು ವಿಶೇಷ ಕೀರ್ತಿಯನು ॥
ತುಂಡುಮುಂಡೇ ತಿಳಿಯಬಾರದೆ ।
ಗಂಡನಂ ನೀಂ ಗುಂಡುಕಲ್ಲಿನ ।
ತುಂಡು ಮಾಡಿದಿಯಾ ವಿಚಾರಿಸಿ ನೋಡುಮರೆಗೆಲಿಸಿ ॥ ೨೩ ॥

ಕೋಣ ವಿಪ್ಪಂತಿರ್ಪೆಯೆಂಬುತ ।
ಮಾಣಕದ ನುಡಿ ನುಡಿದು ಗಂಡಗೆ ।
ಬೇನೆಯಿಲ್ಲದೆ ನೆಳ್ಳುತಿಹ ನೀ ಕಳ್ಳನೆಂತೆಂದು ॥
ವೈನ ಚಾಹವ ಕಾಸಿ ಮೊದಲೇ ।
ಪಾನವಂ ಮಾಡುತ್ತೆ ಕತ್ತಲ ।
ಕೋಣೆಯೊಳು ಕೌದಿಯನು ಪೊರವುತ ಬೀಳ್ವಳೀಂ ಸತಿಯೆ ॥ ೨೪ ॥

ಮಡಿಯೆಯೆಂದೊಡು ಸಿಟ್ಟು ಮನೆಯಂ ।
ಬಿಡು ಬಿಡೆಂದೊಡು ಸಿಟ್ಟುಮೂಟಕೆ ।
ತಡಿತಡೆಂದೊಡು ಸಿಟ್ಟು ಬೆಳಗಿನಲೆಬಿಸಿದೊಡು ಸಿಟ್ಟು ॥
ತಡವ ಬೇಡಾ ಮಂದಿಯಂ ನೀಂ ।
ಕೆಡವಬೇಡಾ ನ್ಯಾಯವಮಂ ದಿನ ।
ಬಿಡದೆ ಪೇಳ್ದೊಡು ಸಿಟ್ಟುಮಿಂಥವರೇನು ಗೃಹಣಿಯರೇ ॥೨೫॥

ಮುಡಿಯ ನೇವರಿಸುತ್ತ ಮುಸುಕನು ।
ಮುಡಿಗಡಿಗೆ ಸರಿಸುತ್ತ ಹುಬ್ಬನೆ ।
ರಡನು ಹಾರಿಸುತಲಿ ವಿದಿತ ಕಡೆಗಣ್ಣ ವಿಸ್ತರಿಸಿ ॥
ಬಿಡದೆ ನೋಡುತ ಮುಗುಳು ನಗೆಯಂ ।
ಪಿಡಿದು ಪರಪುರುಷನನುಮಿೂಕೆಯು ।
ಪಡೆವಳೇ ಸೌಖ್ಯವನು ಮನೆಯಂ ಮುಂದೆ ತರುತಿಹಳೇ ॥ ೨೬ ॥

ಪಗಲಿರುಳು ಪತಿಸೇವೆಯಂ ಬಲು ।
ಸೊಗಸಿನಿಂ ಮಾಡುತ್ತೆ ನುಡಿಯೊಳು ।
ಅಗಲು ಬೆರಸದೆ ಪತ್ತು ಮಕ್ಕಳ ತಾಯಿ ತಾನಾಗಿ ॥
ಬಿಗಿದ ಮುಖವಂ ಬಿಟ್ಟು ಮಿಗೆ ನಂ ।
ಬಗೆಯೊಳಂ ಮನೆ ಪಿಡಿದಿರುವ ಸತಿ ।
ಬಗೆಯೆ ಸ್ವೈರಿಣಿಯಾಗದವಳೇ ಶ್ರೇಷ್ಠಳೆಂತೆಂದು ॥ ೨೭ ॥

ಅಲ್ಲಿಯಾತನು ಸತ್ತನೀಗಾ ।
ನಿಲ್ಲಿ ಯೌಷಧ ಕೊಟ್ಟರೇಸುಂ ।
ಹೊಳ್ಳಿ ಪೋಗೆಂತೆಂದು ಕಳುಪಿದನಾಗಳೆ ಯತೀಂದ್ರ ॥
ಬಳ್ಳು ಮುರಿಯುತೆ ಯತಿಯ ಕಿಟ್ಟುತ ।
ನಿಲ್ಲದಲ್ಲಿಂ ಬಂದು ಮನೆಯೊಳ ।
ಗಳ್ಳಿ ಹಾಸಿಗಿ ಬಿಟ್ಟು ಗಂಡನು ಸತ್ತುದಂ ನೋಡಿ ॥ ೨೮ ॥

ಅಯ್ಯೋ ಯನ್ನಯ ಪತಿಯೆಯೆನ್ನಂ
ಕೈಯ್ಯ ಬಿಡುವುತ ಪೋದೆಯಾ ನೀ ।
ನಯ್ದೆ ಮಿನುಗಂ ಪಾಳು ಮಾಡುತ ವಿಧವೆ ಮಾಡಿದಿಯಾ ॥
ಅಯ್ಯೋಗನು ನಿನ್ನನ್ನು ಮೊಯ್ದನೆ ।
ಮೊಯ್ಯುವದು ಕಂಡಿದ್ದರವನಾ ।
ಕೊಯ್ಯುತಿರ್ದೆನುಮೆಂದು ಶೋಕಿಸಿ ಮುಗಿಸಿದಳುಮೆಲ್ಲ ॥ ೨೯ ॥

ಹಾಳ ಹರಟೆಯ ಮಾತನಾಡಲು ।
ಕೂಳನುಂ ತಾಂ ಬಿಟ್ಟು ಕೂಡ್ರುವ ।
ವೇಳೆಯಂ ಕಳೆಯುತ್ತಲಿಹನುಂ ಶಾಸ್ತ್ರಕೇಳದಲೆ ॥
ಜೇಲು ಬಿದ್ದೋಡು ಪೆಟ್ಟು ತಿಂದೊಡು ।
ಫಾಲ ನೇತ್ರನೆ ನಿನ್ನ ಭಜಿಸದ ।
ಮೂಳರಂ ಪಿಡಿಪಿಡಿದು ಶಿಕ್ಷಿಸಿ ಪೊರೆಯೊ ಮುದವಿತ್ತು ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ ಆಧುನಿಕ ಕವಿವರ್ಯ ಗುಡಿಸಾಗರ ಶ್ರೀಮದ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೨೨ ನೇ ಅಧ್ಯಾಯ ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೬೭೧

# ೨೩ನೇ ಅಧ್ಯಾಯ

ಸೂಚನೆ :

ವೀರ ಕಲ್ಲಯ್ಯನಿಗು ವರ ಮ್ಯಾ।
ಗೇರಿ ದೇಸಾಯರಿಗು ಬಲು ನಿ।
ರ್ಧಾರ ಪೇಳಿದ ವಿಷಯ ಬರೆಯುವೆ ನೀ ಪುರಾಣದೊಳು ॥ ಪಲ್ಲ ॥

ಲಗ್ನ ಪತ್ರಿಕೆಯಲ್ಲಿ ನಿನ್ನಸು।
ವಿಘ್ನ ಹಾರಕನೆಂದು ಮನದೊಳು।
ಮಘ್ನರಾಗುತೆ ಬೇಗ ಛಾಪಿಸಿ ಕಳಿಸರಾಪ್ತರಿಗೆ॥
ಅಗ್ನಿ ನೇತ್ರನೆ ಯಶವನವರಿಗೆ।
ಭಗ್ನ ಮಾಡದೆಯಿಡುವೆ ನನ್ನಯ।
ಲಗ್ನ ಮುಕ್ತಾಂಗನೆಯು ಕೂಡಿರಲಿದಕು ಶುಭ ಮಾಡೈ ॥ ೧ ॥

ಈಗಿನವರುದ್ಯೋಗವೇನೆನೆ।
ಸ್ತ್ರೀಗಳೋಡಿಸಿಕೊಂಡು ಪೋಗ್ವುದು।
ಮೇಗೆ ಪಾವನ ಸಾಧುವಾಗ್ವುದು ಸಾಲ ಹೆಚ್ಚಾಗಿ॥
ಮೂಗರಿಗೆ ಬೋಧೆಯನು ಕುಡುವುದು।
ಲಾಘವದೊಳಿರುತಿರುವದಿಂತುಂ।
ಹೀಗಳೆದು ನುಡಿವಂಥ ಜನರಿಗು ಸುಖವ ಕುಡು ಶಿವನೆ ॥ ೨ ॥

ಹೊಳೆಯುವಾ ಬೆಳಕಾದ ಮೇಲಿ।
ನ್ನಳಕುವದು ತಾನಿಲ್ಲವೆಲ್ಲೆಡೆ।
ಚಲುವ ಚಂದ್ರಮರಾದ ಸಜ್ಜನ ಕುಳದ ದರ್ಶನವು॥
ಒಲೆದು ಪೂರ್ಣಾನಂದ ತಾನೇ।
ಬಳಿಗೆ ಬಪ್ಪುದು ಷಡ್ರಿಪುಗಳಾ।
ತಳಮಳವು ಸರಿಯುತ್ತೆ ಕೈಸಾರ್ದಪುದು ನಿಜ ಮುಕ್ತಿ ॥ ೩ ॥

ಭೂಮಿ ಮೇಲೆಯು ಬಿದ್ದ ಹೇಮವ ।
ಕಾಮಿಸುತ್ತಲಿ ಪಿಡಿಯ ಬಾರದು ।
ಕಾಮಿನಿಯು ಮೈಮೇಲೆ ಬಿದ್ದೊಡುಮೆಳಸದಿರಬೇಕು ॥
ಆ ಮಹಾವಿರತಿಯನು ಬಿಡದೀ ।
ನೇಮವಮಂ ಪಾಲಿಪೊಡೆ ತಪ್ಪದೆ ।
ಸೋಮಧರನಾಗುವನುಮೆಂದಾವಮ್ನಾಯ ಪೇಳುವವು ॥ ೪ ॥

ನಾರಿಯಿಲ್ಲದ ಮನೆಯು ಜಗದೊಳು ।
ನೀರುಮಿಲ್ಲದ ವೂರುಮೋವಜ ।
ರಾರುಮಿಲ್ಲದ ಮಠವು ನೂರಾರಿದ್ದರೇನೊಪ್ಪೇ ॥
ಆ ರಸಿಕರಿವರಿಯದರಿಂತುಂ ।
ಮೂರು ಸಾಸಿರ ಕೋಟಿಯಿದ್ದೊಡು ।
ಚೂರು ಳಾಭಿಲ್ಲೆಂದುಮೊಳ್ಳಿದರೆಲ್ಲರೊರೆಯುವರು ॥ ೫ ॥

ಇರಲಿದಿಲ್ಲಿಗೆ ಮುಂದೆ ಮತ್ತೊಂ ।
ದೊರೆವೆ ಲೀಲೆಯ ನೀ ಮಹಾತ್ಮನ ।
ಪರಮ ಭಕ್ತರು ಕೇಳಿ ನಲಿವುದು ಬೇಸರಂಗೊಳದೆ ॥
ಸರಸ ಕಲ್ಲಯ್ಯೆಂಬ ಭಕ್ತನು ।
ಪಿರಿಯ ಶಿಷ್ಯನು ಸಾಧುವಜ್ಜಗೆ ।
ಮೆರೆಯುತಿಹನುಂ ಸೊಟಕನಾಳ ಗೃಹಸ್ಥ ತಾನಾಗಿ ॥ ೬ ॥

ಇವನುಮಜ್ಜನಿಗಡಿಗೆ ಮಾಳ್ಪವ ।
ಸವಿಯ ಕಾರವನರಿದು ಕುಟ್ಟುವ ।
ನಿವುಳ ಪುಂಡೀ ಪಲ್ಲೆ ಮತ್ತೆ ತಯಾರಮಾಡಿಡುವ ॥
ಇವನನುಂ ಕರೆದೊಯ್ದು ಯತಿಯುಂ ।
ತವೆ ಮಸಾಲಿಯ ಪುಡಿಯ ತುಂಬಿಸಿ ।
ಕವಲಿರಿದು ಬದನಿ ಫಲವ ಗಿಡದೊಳೇ ಕರಿಸುತಿಹನು ॥ ೭ ॥

ಈತ ಮಾಡಿದ ಸಾರು ಕುಡಿದೊಡೆ ।
ಭೂತ ಬಿಟ್ಟೋಡುವವು ನಿಲ್ಲದೆ ।
ಪ್ರೀತರಾಗ್ವರು ದೇವ್ತರಿದು ಸುಧೆಗಿಂತ ಮೇಲೆಂದು ॥
ಆತುರರರು ಸ್ವೀಕರಿಸೆ ತಮ್ಮಯ ।
ಜಾತ ಗದದಿಂ ಮುಕ್ತರಾಗ್ವರು ।
ಸೈತು ಬಂಜೆಯರೆಲ್ಲ ವೀಂಟಿ ಸುಪುತ್ರರುದಿಸುವರು ॥ ೮ ॥

ಶವುಮೆಂಟಾನೆಂಟು ದಿನವುಂ ।
ಟಿದು ಘಮಘಸು ನಾರುತಿಪ್ಪುದ ।
ದ ರುಚಿಗಮನವರತ ನಾಲಿಗೆ ನೀರು ಬಿಡುತಿಹುದು ॥
ಟಿರದೊಳು ನವ ಶಕ್ತಿಯುದಿಸುತ ।
ಮಿರಿಮಿರಿಯು ಮಿಂಚುವದುಮಿಂಥಹ ।
ಸರಸ ಸಾರದು ರಾಜ ಮಂದಿರದೊಳಗು ದುರ್ಲಭವು ॥ ೯ ॥

ಒಮ್ಮೆಯಿಂತನ ಮುಖವು ಬಾಡಿದು ।
ದೊಮ್ಮತಾಗದೆ ಕೇಳ್ದನಜ್ಜನು ।
ಕಮ್ಮಿಯೇನಿದೆ ಕುಡುವೆ ಕೇಳಿಕೊ ಸೇವೆಗೊಲದಿರುವೆ ॥
ಸಮ್ಮತವನಿಂತುಸುರಲವ ಪರ ।
ಬ್ರಹ್ಮ ಮೂರ್ತಿಯೆ ನನಗೆ ಮಕ್ಕಳ ।
ಸೊಮ್ಮುಯಿಲ್ಲವು ದೀಪಕೊಬ್ಬನ ಕರುಣಿಸೆಂತೆಂದ ॥ ೧೦ ॥

ಕಲ್ಲಣೀತಕೆ ನಿನಗೆ ಜಗದೊಳು ।
ಕಲ್ಲಜವನುಂ ಕುಡುವೆನಿಂದುಂ ।
ಬಳ್ಳಿ ಚಲೊಯಿದ್ದಲ್ಲಿ ಕಾಯಿಯು ತಾನೆ ಚಲೊಯಿಹುದು ॥
ನಿಲ್ಲದೂಟಕ ಕುಳಿತ ಸಮಯದಿ ।
ಸಲ್ಲಿಸುವ ಪ್ರಾಸಾದಮಂ ನೀಂ ।
ಮೆಲ್ಲು ಮಕ್ಕಳ ಚಿಂತೆಯಂ ಬಿಡುನಾಗುವವುಮೆಂದ ॥ ೧೧ ॥

ಕೆಲವು ದಿವಸದಮೇಲೆಯಾತನ ।
ಲಲನೆ ಗರ್ಭಿಣಿಯಾಗೆ ಜನಗಳು ।
ತಿಳಿದುಮುಜ್ಜನಮಹಿಮೆಯಂ ಬಣ್ಣಿಸಿದರೇವೇಳ್ವೆ ॥
ಇಳಿದು ಶಿವನೇ ಬಂದಿಹನುಮಿವ ।
ನಿಳೆಯ ಜನರಂ ಕೊಂಡುಮೊಯ್ದೊ ।
ಹಳೆಯ ಭವಮಂ ತುಳಿದು ಕೈಲಾಸದಲಿ ಕೂರ್ಪಿಸುವ ॥ ೧೨ ॥

ಇವನ ನಡೆ ನುಡಿ ಸತ್ಯವಲ್ಲದೆ ।
ಲವವು ವಚನದಿ ಸೋಲನಾರಿಗು !
ನೆವಕೆ ಧರಿಸಿಹ ಮನುಜ ತನುವಂ ಹರನೆ ತಾನಿರ್ದುಂ ॥
ಕವಿತೆಯೊಳಗದ್ವಿತಿಯನಿರ್ದೊಡು ।
ಜವದಿ ನಿರಹಂಕಾರ ತೋರ್ಪಂ ।
ಪ್ರವಿಮಳನು ಶರಣರಿಗೆ ಶಿಶುವೆಂದೆನಿಸಿ ಬಾಳುವನು ॥ ೧೩ ॥

ಸೂಸುತಿಹ ಬಲು ಮಂಜಿನೊಳು ಮಿಗೆ ।
ಬೇಸಿಗೆಯ ಬಿಸಿಲಿನೊಳು ಕುಂಬರ ।
ಬೀಸುವಾ ಗಾಳಿಯೊಳು ಸಿಕ್ಕುತೆ ಕೂಸಳಿವವೆಂದು ॥
ಬೇಸರಂ ಗೊಳ್ಳದಲೆ ಬೋಧಿಸಿ ।
ಕ್ಲೇಶದಿಂದುಳಿಸುವವೊಲೀ ಭವ ।
ಪಾಶದೊಳು ಸಿಲ್ಕಿರ್ದ ನಮ್ಮಂ ತೆಗೆದು ಕಾಪಿಡುವ ॥ ೧೪ ॥

ಮುಂದೆ ಕಲ್ಲಯ್ಯಂಗೆ ಪುತ್ರನು ।
ಚಂದದಿಂದುದಿಸಲ್ಕೆ ಮುದದಿಂ ।
ದಂದು ಯತಿಯಂ ತಂದು ಪೂಜಿಸಿ ದಕ್ಷಿಣೆಯನಿತ್ತು ॥
ಬಂದೆಯಾ ಪ್ರಸ್ಥವನು ಮಾಡಿಸಿ ।
ಮಂದಿಗುಂ ಗುರುವಿಂಗುಮುಣ್ಣಿಸಿ ।
ಪಿಂದಿನಿಂ ಕಳುಪಿದನು ಸಂಭ್ರಮದಿಂದೆ ಸರ್ವರನು ॥ ೧೫ ॥

ಒಮ್ಮೆ ಮತ್ತೇನಾದುದೆಂದೊಡೆ ।
ರಮ್ಯದ ಮನೆತನಸ್ಥರಾದಾ ।
ಬಿಮ್ಮಿನಾ ವ್ಯಾಗೇರಿ ದೇಸಾಯಿಯರುಮಜ್ಜನಿಗೆ ॥
ನೆಮ್ಮಿ ಬಿನ್ನಾಯವನು ಪೇಳಲ್ ।
ಸೌಮ್ಯನದನುಂ ಧಿಕ್ಕರಿಸುತಂ ।
ಹೊಮ್ಮಿ ಕೋಪವು ನುಡಿವನುಣಲಾರಿಲ್ಲೆಯೆಂತೆಂದ ॥ ೧೬ ॥

ಆಗವರು ಗಾಬರಿಸಿ ಬಿಡದೆಯು ।
ಬೇಗನೇ ಯತಿ ಗುರುತಿನವನಂ ।
ರಾಗದಿಂ ಕರತಂದುಮವನಿಂದುಸುರಿಸುತ್ತಿರಲು ॥
ಯೋಗಿಯಾತಗು ಬೇಡ ನಾಂ ಮಿಗೆ ।
ಯಾಗಡಿಕರಾನ್ನವನುಮುಂಬೆನು ।
ಪೋಗು ಸುಮ್ಮನೆಯಿದರೊಳಗೆ ಕೈಹಾಕ ಬೇಡೆಂದ ॥ ೧೭ ॥

ಅನ್ನವುಣ್ಣುವುದರೊಳು ನೇಮುಗ ।
ಳಿನ್ನು ಬಹುವಾಗಿಹವಿವುಗಳಂ ।
ಕಣ್ಣಿನಿಂ ನೋಡದಲೆಯುಂಡೊಡೆ ಪಾಪ ಘನವಹುದು ॥
ಗನ್ನ ದಂಕನದನ್ನವುಂಡೊಡೆ ।
ಚನ್ನ ಮನ ಮಾಲಿನ್ಯ ಪೊಂದುತೆ ।
ಧನ್ಯತೆಯು ಕೈಸಾರದಿದನುಂ ತಿಳಿದುಕೋಯೆಂದ ॥ ೧೮ ॥

ಸಿರಿಯ ಮದದಿಂ ಜನರ ಜರೆವರ ।
ಗುರುವಿನಾ ಪದಕೆರಗದಿರ್ಪರ ।
ಹರೆಯದೊಳುಮಾಭಂಡರೆನಿಸುತ ರಂಡೆಯಾಳವರ ॥
ಕುರಿಯು ಕೋಳಿಯು ಹರಿದು ತಿಂಬರ ।
ಸೆರೆಯು ಸೇಂದಿಯು ಭ್ರಾಂಡಿ ಕುಡಿವರ ।
ದುರುಳರನ್ನವ ಕಚ್ಚ ಬಾರದು ತಿಳಿದುಕೋಯೆಂದ ॥ ೧೯ ॥

ಬಡವರನು ಬಳಲಿಸುವ ದುಷ್ಟರ ।
ದುಡಿದ ಕೂಲಿಯ ಮುಳುಗಿಸುವವರ ।
ಕಡವುಮೊತ್ತೆಯು ಲಂಚ ಲಾಭವ ತಿಂದು ಗಳಿಸವರ ॥
ಬಿಡದೆ ಬಡ್ಡಿಗೆ ಬಡ್ಡಿ ತಿಂಬ್ವರ
ಕೆಡಕು ಮಾಳ್ಪ ದರೂಡಿ ಖೋರರ ।
ಹೊಡೆವರನ್ನವ ಕಚ್ಚಬಾರದು ತಿಳಿದುಕೊಯೆಂದ ॥ ೨೦ ॥

ಶರಣರನು ಹಚಿಗೊಳ್ಳದಿಪ್ಪರ ।
ಕರವನೆತ್ತಿಡದಂಥ ಜೀನರ ।
ಹರನ ಪೂಜಾದಿಗಳನೆಸಗದೆ ಗರುವ ತೋರಿಪರ ॥
ಸರಸ ಬಣವಿಗೆ ಬೆಂಕಿಯಿಡುವರ ।
ನಿರುತ ಸುಳ್ಳಾಡವರ ಸದ್ಮನಿ ।
ಮುರಕರನ್ನವ ತಿನ್ನಬಾರದು ತಿಳಿದುಕೋಯೆಂದ ॥ ೨೧ ॥

ಪಿಂದಿನ ಪುರಾತನರ ನಡೆನುಡಿ ।
ಯಿಂದಲೊಪ್ಪುವ ಸದ್ಗೃಹಸ್ಥರ ।
ನಂದಿವಾಹನ ಭಕ್ತಿಯೇ ಬಹು ಭಾಗ್ಯವೆಂಬವರ ॥
ಚಂದದಾ ಸ್ವಾಮಿಗಳ ಕಂಡೊಡೆ ।
ವಂದಿಸುತೆ ಚರಣಾರವಿಂದದಿ ।
ಬಂಧು ಭಾವದಿ ಕರೆದರಲ್ಲಿಯೆಯುಣ್ಣಬೇಕೆಂದ ॥ ೨೨ ॥

ಇನಿತು ಪೇಳ್ದೊಡು ಗುರುತಿನವನುಂ ।
ಮಣಿದು ಪದಮಂ ಗಟ್ಟಿ ಪಿಡಿಯುತೆ ।
ಕನಿಸು ದೇಸಾಯಿಗಳ ಮೇಲಿನದು ತೆಗೆದೂಟವನು ॥
ಅನಘನೇ ನೀ ಮಾಡಬೇಕೆನೆ ।
ಮನದಿಯೊಪ್ಪದೆ ಸನುಮತಿಲ್ಲದೆ ।
ಗುಣಗುಡುತೆ ಸೈಗೊಟ್ಟನುಂ ಬಲು ಖೊಟ್ಟಿಯಾಗದಲೆ ॥ ೨೩ ॥

ಆಗಳೆ ನವ ರಸಾನ್ನದಡಿಗೆಯು ।
ಯೋಗಿಗಾಗಿ ತಯಾರವಾಯಿತು ।
ರಾಗದಿಂದಲಿಯುಣಿಸಿ ಬಳಿಕಂ ನೂರು ರೂಪಾಯಿ ॥
ಸೈಗೆಡೆದು ದಕ್ಷಿಣೆಯನಿಡಲುಂ ।
ಬೀಗಿ ಕರದಿಂದವನು ಪಿಡಿಯದೆ ।
ಪೋಗಿಯಂಗಳದಲ್ಲಿ ನಿಂತ ವ್ಯಲೀಕವಿದುವೆಂದು ॥ ೨೪ ॥

ಗುರುತಿನಾ ಮಿಗೆ ಭಕ ತನಾಗಳೆ ।
ಕರದೊಳಂ ತಕ್ಕೊಂಡು ಯೋಗಿಯ ।
ಚರಣಕೊಪ್ಪಿಸಿ ಬಿಡುವೆ ಚಿಂತೆಯ ಬಿಡಿರಿ ನೀವೆಂದ ॥
ಹರುಷಮಂ ಮಿಗೆ ಪೊಂದಿ ದೇಸಾ ।
ಯರು ವಿರಾಗಿಯ ಕಳುಪೆ ಮಾರ್ಗದಿ ।
ಗುರುತಿನಾ ವರ ಭಕುತ ತೋರಿದ ತಂದ ದಕ್ಷಿಣೆಯ ॥ ೨೫ ॥

ಅರಚಿ ಎಲವೋ ಮೂರ್ಖ ಪಾಪಿಯು ।
ಸುರಿದ ಧನಮಂ ಪಿಡಿದೆಯೇತಕೆ ।
ಭರದೊಳೀ ದೋಷಕ್ಕೆ ನಿನ್ನಯ ಹಿರಿಯ ಮಗನೀಗ ॥
ಹರಣಮಂ ಬಿಟ್ಟಪರ್ಪನೂರೊಳು ।
ತರವೆ ನಿನಗಿದುಯೇಕೆ ಮುಟ್ಟಿದೆ ।
ದುರುಳರೊಡವೆಯು ಪಿಡಿಯೆ ದುಃಖವನುಣ್ಣಬೇಕೆಂದ ॥ ೨೬ ॥

ಅವಸರದಿ ಮನೆಗೋಡಿ ಬಂದುಂ ।
ಶ್ರವವ ನೋಡಿದ ಗೋಡೆಗಿಟ್ಟುದ ।
ತವಸಿ ನುಡಿದುದು ಸತ್ಯವಾಯ್ತೆಂದತ್ತು ಮಣ್ಗೊಟ್ಟು ॥
ಅವನಿಯೊಳು ನಿನಗಾರು ಸರಿಯೈ ।
ಲವವು ದಾರಿಯ ಬಿಡದೆ ಸ್ವಾಸ್ಥ್ಯದ ।
ಸವಿ ಸೊಬಗಿನಾ ತತ್ತ್ವದೊಳು ಮೆರೆಯುವೆ ವಿರಾಗದೊಳು ॥ ೨೭ ॥

ಜನಕನಾ ಮಂದಿರದ ಸಖಿಯರು ।
ಕನಕ ಕಾಂತಿಯೊಸರ್ವ ಶುಕನಾ ।
ತನುವ ಘಟ ಕುಚದಿಂದವೊತ್ತುತ ಗಂಧ ಕಸ್ತುರಿಯ ।
ಹಣೆಗೆ ಲೇಪಿಸಿ ಭುಜದೊಳಪ್ಪುತೆ ।
ದಣಿದು ಕೊಂಡೊಡು ಕಲ್ಲು ಗೊಂಬೆಯ ।
ತುಣಕಿನೊಲು ಕುಳಿತಿದ್ದನಂತೆಯೆ ನೀನುಮೆಂತೆಂದ ॥ ೨೮ ॥

ತಂದೆ ನೀನುಂ ಕಂದ ನಾನುಂ ।
ಬಂಧು ನೀನುಂ ಮಂದ ನಾನುಂ ।
ಚಂದದಿಂ ತವ ಪಾದರಕ್ಷೆಯ ಕಾಯ್ವ ಚರ ನಾನು ॥
ಇಂದುಮೊರಳೊಳು ತಲೆಯನಿಟ್ಟಿಹೆ ।
ಬಂದು ವನೆಕೆಯ ಪೆಟ್ಟು ತಪ್ಪಿಸು ।
ಭೇದ ವಡಲಿಗಮಾಸರಾಗ್ಯೆ ರುದ್ರುರಾ ಶಿಷ್ಯ ॥ ೨೯ ॥

ಎಲ್ಲಿಯರ್ಜುನ ಕೃಷ್ಣರಿರ್ಪರೋ ।
ಅಲ್ಲಿಯೇ ಸ್ವಾರಾಜ್ಯ ಲಕ್ಷ್ಮಿಯು ।
ನಿಲ್ಲದೇ ಸುಳಿದಾಡುವಂದದಿ ಮೋಕ್ಷವಾ ಲಕ್ಷ್ಮಿ ॥
ಬಲ್ಲಿದನೆ ನಮ್ಮಿಬ್ಬರಾ ಬಳಿ ।
ಲಲ್ಲೆಯಿಂ ಸುಳಿದಾಡುವಂತೆಯು ।
ಜಲ್ಲನೇ ನೀ ಮಾಡು ಪರಶಿವ ದಿನಗಳುಳದಿಲ್ಲ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮದ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೩೩ನೇ ಅಧ್ಯಾಯವು ಮುಗಿದುದು ॥

— ಶುಭಂ : —

ಒಟ್ಟು ನುಡಿಗಳು ೭೦೧

## ೨೪ ನೇ ಅಧ್ಯಾಯ

**ಸೂಚನೆ :**

ಸಾಧುವಜ್ಜನು ಗದಗಿನುತ್ಸವ ।
ವೈದೆ ನಡೆಯುವದೆಂದುದಂ ಸಲೆ ।
ಯಾದರದಿ ಗೂಳಪಗೆ ಹರಿಕೆಯನಿತ್ತುದಂ ಬರೆವೆ ॥ ಪಲ್ಲ ॥

ಗುರುವೆ ಕರತಳವಿಟ್ಟು ಭ್ರಮೆಯಂ ।
ಪರಿಹರಿಸಿ ನೀ ಯೆನ್ನನೆಂದಿಗು ।
ಮರಳಿ ಬಾರದವೋಲು ಮಾಡ್ವೆ ಧರಣಿ ಮಂಡಲಕೆ ॥
ನೆರಳಿನೊಳು ನೆರಳಡಗುವಂತೆಯು ।
ಪರಮ ಶಿವ ಜೀವರನುಮಡಿಗಿಸಿ ।
ವರ ವಿಶಾಲದ ಶಾಂತಿಯಂ ಕುಡು ಪದಕೆ ನಾಂ ನಮಿಪೆ ॥ ೧ ॥

ರಟ್ಟೆಯಂ ಮುರಿಮುರಿದು ದುಡಿದುಂ ।
ರೊಟ್ಟೆಯಂ ತಿನಬೇಕು ಕಮ್ಮಗೆ ।
ತುಟ್ಟೆಯಿರ್ಪವು ಕಾಳುವೆಂಬುದನರಿವುದಿಲ್ಲೇಕೆ ॥
ಉಟ್ಟ ಧೋತರ ಕೊರಳ ಸುತ್ತುತೆ ।
ಬುಟ್ಟಿಯಂ ಪಿಡಕೊಂಡು ಮನೆಮನೆ ।
ರೊಟ್ಟಿಗಮಲೆವರೆಂಬ ಸಿತಗಗು ಶಿವನು ಸುಖವಿಡಲಿ ॥ ೨ ॥

ನಾಗನೂರಿನ ಪ್ರಮುಖ ಗೂಳಪ ।
ಬೇಗ ಅಜ್ಜನ ಬಳಿಗೆ ಬಂದುಂ ।
ಬಾಗುತ ಶಿವಾನಂದ ಸ್ವಾಮಿಗಳವರ ಮಠವನ್ನು ॥
ರಾಗದಿಂ ಗದಗಿನೊಳು ಕಟ್ಟುವ ।
ದಾಗಿ ನಿಶ್ಚಯಮಾಡಿರುವೆವಿದು ।
ತೂಗುವದೊ ನಮ್ಮಿಂದವೆಂಬುದ ಕೇಳುತಿಹೆನೆಂದ ॥ ೩ ॥

ಮತ್ತೆಯುತ್ಸವ ತೇರು.ಪಾಲಕಿ ।
ಸ್ತುತ್ಯ ಜಾತ್ರೆಯು ವಿಘ್ನವಿಲ್ಲದ ।
ಲುತ್ತಮತೆಯಿಂ ಸಾಗುಗೊಳ್ವವೊ ಪೇಳಿರೆಂತೆನ್ನೆ ॥
ಸತ್ಯನಾಗಳೆ ಬೆಲ್ಲಕಿರುಬೆಯು ।
ಮುತ್ತುವಂತೆಯು ಜನರು ಮುತ್ತುತೆ ।
ಪೊತ್ತು ಮೆರೆಸುವರಾಮಾಹಾತ್ಮ್ಯನ ಚಿಂತೆ ಬಿಡಿರೆಂದ ॥ ೪ ॥

ಮೆರೆಯುವ ಮಹಾ ಯೋಗವಿದೆ ಯಾ ।
ಮೆರವಣಿಗೆಯುಂ ಸುಗಮ ಸಾಗ್ವದು ।
ಸರಿದು ಪೋಗ್ವವು ಬಂದ ವಿಘ್ನಗಳೆಲ್ಲ ತಾವಾಗಿ ॥
ಪರಮ ಶ್ರೀಗುರು ರುದ್ರರಂತಃ ।
ಕರುಣಮವರಿಗು ಲಭಿಸಿ ಕೊಂಡಿರೆ ।
ಹರಿಹರರುಮಡ್ಡೈಸಿ ಬಂದೊಡು ಕೆಡುವದಿಲ್ಲೇನು ॥ ೫ ॥

ಸಕಲ ಜೀವರನೆತ್ತಿ ಮೋಕ್ಷದ ।
ಸುಕರ ಬಾಗಿಲಿಗೊಯ್ವುಯಿವರಾ ।
ಕಕುಲತೆಯ ಮಿಗೆ ಕಂಡು ದಿಕ್ಪಾಲಕರು ಸಹಮೊಪ್ಪಿ ॥
ಮುಕುರುವರು ತಕರಾರು ಮಾಳ್ಪನ ।
ಮುಖದ ಮೇಲೆಯು ಜಡೆದುವೋಡಿಸಿ ।
ಸುಖವನುಂ ಕುಡುತಿಹರುಮಿವರಿಗೆ ಮೂಗುವಡೆವಂತೆ ॥ ೬ ॥

ಕೆಲವು ಮತವಾದಿಗಳುಮಿವರಿಗೆ ।
ಸಲೆ ವಿಪತ್ತುಗಳನೆಸಗಿದೊಡಂ ।
ತಿಲದನಿತು ಪೆಳ್ವಳಿಸದವಕಂ ಸೊಪ್ಪು ಹಾಕದಲೆ ॥
ತುಳಿದು ಮಾ ಕೇಶರಿಯುವೊಲು ಮೆರೆ ।
ದಿಳೆಯೊಳದ್ವೈತಮುಂ ವಿಬೋಧಿಸಿ ।
ಸಲುವ ಜಿಜ್ಞಾಸುಗಳ ಕಾಪಿಡುತಿಹರು ಭವದಿಂದೆ ॥ ೭ ॥

ಲೋಕ ಕಲ್ಯಾಣವದುಮಿವನಿಂ ।
ಜೋಕೆಯಿಂ ನಡೆಯುವದು ಚಿನ್ನದ ।
ಚೌಕಳಿಯು ತಾನೆನಿಸಿ ನಡೆವನು ನಿತ್ಯ ಚೆನ್ನೊಪ್ಪೆ ॥
ಸಾಕುಮೀ ಸಂಸಾರ ಭೂತದ ।
ಭೀಕರತೆಯೆಂಬಾ ಮುಮುಕ್ಷು ವಿ ।
ಗೇಕ ತತ್ತ್ವವನರುಪಿ ಕಲ್ಪಿತ ಭಾವಮಂ ಕಳೆವ ॥ ೮ ॥

ಜಪ ತಪಾದಿಯನೆಸಗಿ ನಿತ್ಯಂ ।
ಗುಪಿತವಾದಾ ಬ್ರಹ್ಮ ತತ್ತ್ವವ ।
ಸಪದಿ ಜೀವಾತ್ಮರ್ಗೆ ಬೋಧಿಸಿ ಕಳೆವ ಯಮ ಬಾಧೆ ॥
ಸಫಲ ಮಾಡುವ ಮನುಜ ಜನ್ಮವ ।
ಹಪಳಿ ನಾಳ್ಪನು ಹಿಚುಕಿ ಕಾಮನ ।
ದುಪುಳಿಯಂ ಹರಿಗಡಿದು ಚಿನ್ಮಯ ಸುಖವನುಂ ಕುಡುವ ॥ ೯ ॥

ಒಂದೆ ತಾಣದಿ ಕೂರ್ಪಡೀತನು ।
ಹೊಂದಿ ಪಟ್ಟಣ ಹಳ್ಳಿಗಳೊಳಂ ।
ಚಂದವಾದಾ ಸ್ವಾನುಭವಮಂ ಸುರಿಸಿ ಕುಲಗೋತ್ರ॥
ಗೊಂದಲವ ಪಿಡಿಯದಲೆ ದೀಕ್ಷೆಯ ।
ನಂದು ಕುಡುವುತೆ ಕೀಟ ಭೃಂಗದ ।
ಸಂದ ನ್ಯಾಯದವೋಲು ದೇವರ ಮಾಳ್ಪನೆಲ್ಲರನು ॥ ೧೦ ॥

ಬಳಿಕಮೆಲ್ಲರು ಹರುಷದಿಂ ಮುನಿ ।
ತಿಲಕನಾ ನುಡಿಯಂತೆಯೆಲ್ಲವ ।
ನಳುಕುಮಿಲ್ಲದಲೆಸಗಿಯೊಮ್ಮೆಯು ಪಾಲ್ಕಿಯುತ್ಸವವ ॥
ಪಲವು ಭಕ್ತರು ಕೂಡಿ ಯೋಚಿಸಿ ।
ನಲುವಿನಿಂದೆಸಗೋಣವೆಂಬುತ ।
ತಿಳುಪಿದರು ಪಳ್ಳಿಂಗೆ ಸುತ್ತಲು ಪತ್ರಿಕೆಗಳಿಂದೆ ॥ ೧೧ ॥

ಬಂದು ಸೇರಿದರು ಗದಗಿನಾ ಮಠ ।
ಕಂದುವೆಲ್ಲೆಡೆ ಭಕುತ ಜನಗಳ ।
ಸಂದಣಿಯು ತಾಂ ಬೆಂಡು ಬಾಜೆಯು ಕಹಳೆ ಡೊಳ್ಳುಗಳ ॥
ಸುಂದರಾಧ್ವನಿ ಭಜನಿಯಾರತಿ ।
ಚಂದ ಮಾಡಿದ ಪಾಲ್ಕಿಯೊಳು ಗುರು ।
ವಂದ್ಯನಂ ಕೂರ್‍ಪಿಸುತೆ ನಡೆದರು ಗಟಗಿನಾ ಪುರದಿ ॥೧೨॥

ಕೆಲ ದುರಾತ್ಮರು ತಮ್ಮವೋಣೆಯ ।
ಬಳಿಗಮುತ್ಸವ ಬಂದ ಮಾತ್ರದಿ ।
ತಳವಿ ಪಿಂದಕಮುಟ್ಟಿಯಪಮಾನವನು ಬಲ್ವೆಸಗಿ ॥
ಕಳುಪಿ ಬಿಡಬೇಕೆಂದು ಯೋಚಿಸಿ ।
ಸಲುವ ಸೇರಿನ ಕಲ್ಲು ಕಟ್ಟಿಗೆ ।
ಸಲಗುಗಳನುಂ ಪಿಡಿದು ಮಾಳಿಗೆಯೇರಿ ನಿಂತಿರಲು ॥ ೧೩ ॥

ಮೆರವಣಿಗೆಯುಂ ಸಾಗಿ ಮುಂದಕೆ ।
ಬರೆ ಕುಹಕರುಂ ಬೇಗ ಕಲ್ಲನು ।
ಸುರಿಯಬೇಕೀ ಪಾಲ್ಕಿಮೇಲೆಂತೆಂದು ಕಣವೆತ್ತಿ ॥
ಸುರಿವನಿತರೊಳು ನಿಂತ ಮಾಳಿಗೆ ।
ಮುರಿದು ಧೊಪ್ಪನೆ ಕೆಳಗೆ ಬೀಳಲ್ ।
ಶಿರವಡೆದು ಮುಖ ಕೆತ್ತಿ ಮೂಗಿನ ಸೆಂಬೆಯಿಂ ರಗುತ ॥ ೧೪ ॥

ಸೋರಿ ಕೈಕಾಲ್ಮುರಿದುಮಳುವುತ ।
ಥಾರಿ ದುಃಖದೊಳಿರಲುಮಿತ್ತಾ ।
ಬೇರೆ ಕೆಲವರು ಮಣ್ಣಿನಾ ಬುಡದೊಳಗೆ ಸಿಲ್ಕುತ್ತೆ ॥
ನೀರು ನೀರೆಂದೊದರಿ ವಿೂಸಿಗೆ ।
ತೋರ ಬಾಯೊಳು ಮಣ್ಣು ಧೂಳವು ।
ಸೇರಿ ಬಲು ನುಗ್ಗಾಗಿ.ಯತ್ತರು ಪೊರಗೆ ತೆಗೆದಾಗ ॥ ೧೫ ॥

ತಕ್ಕ ಶಿಕ್ಷೆಯ ಪೊಂದಿ ದುಷ್ಟರು ।
ಬಿಕ್ಕಿ ಬಿಕ್ಕಿಯುಮತ್ತು ತಮ್ಮೊಳು ।
ದಿಕ್ಕು ಗಾಣದೆ ಹೆದರಿ ಗುರುವಿಗೆ ನಮಿಸಿ ಪೋದರಲಾ॥
ಚೊಕ್ಕ ಗುಡಿಸಾಗರದ ತವಸಿಗ॥
ಳಕ್ಕರವು ನಿಜವಾಯ್ತುಮೆಂದಾ ।
ಭಕ್ತರೆಲ್ಲರುಮಿತ್ತ ಮನದೊಳು ನುತಿಸಿದರುಮಾಗ ॥ ೧೬ ॥

ಕೆಲವು ದಿವಸದ ಮೇಲೆ ಯುತಿಯುಂ ।
ತಳುವವೆಸಗಿದ ಮತ್ತೆ ಲೀಲೆಯ ।
ತಿಳಪುವೆನು ಭಕ್ತರಿಗೆ ಭಕ್ತಿಯ ಭರದೊಳಿರಲೆಂದು ॥
ಒಲೆದುಮೊಮ್ಮೆಯು ಪಾವನೆನಿಪಾ ।
ಚಲುವ ಶಿರಸಂಗೀಯ ಕಾಳವು ।
ನಲಿ ಸುದರ್ಶನಕೆಂದುಮೊಬ್ಬಂಟಿಗನೆ ತಾ ಪೊರಟು ॥ ೧೭ ॥

ಕ್ಷೇತ್ರವಾದಾ ಗ್ರಾಮ ತಲ್ಪಿವಿ ।
ಧಾತ್ರಿಯಂ ಕಣ್ಣಿಂದೆ ಕಾಂಬುತೆ ।
ಗಾತ್ರವುಂ ನೆಲಕಿಟ್ಟು ನಮಿಸುತಮೂಟವುಂ ಮುಗಿಸಿ ॥
ರಾತ್ರಿಯಲ್ಲಿಯ ಕೋಣೆಯೊಳಗಂ ।
ನೇತ್ರವುಂ ಮುಚ್ಚುತ್ತೆ ಮಲಗಿರೆ ।
ಪಾತ್ರನಂ ಕೋಬಂಬೊ ನಾಮದ ಹವಳ ಜರಿ ಕಡೆದು ॥ ೧೮ ॥

ರಕ್ತ ಹಾಸಲುಮೆಚ್ಚರಾಗುತೆ ।
ಶಕ್ತಿಯೇ ನನಗಿನ್ನು ನಿನ್ನಯ ।
ಮುಕ್ತ ತಾಣೆರವಾಯಿತೆಂಬುತೆ ನಮಿಸಿಯಲ್ಲಿಂದ॥
ಚೊಕ್ಕ ಗುಡಿಸಾಗರಕೆ ಬಂದುಂ ।
ವ್ಯಕ್ತಮಾಡಿದ ಜರಿಯು ಕಡಿದುದ ।
ಭಕ್ತರುಂ ಗಾಬರಿಸಿ ಔಷಧ ಹಚ್ಚಿದರು ಪದಕೆ ॥ ೧೯ ॥

ಏನನುಂ ಮಾಡಿದೊಡು ಹುಣ್ಣದು ।
ವೈನವಾಗದೆ ಕಾಲು ಕೊಳಿತುಂ ।
ಬೇನೆ ಹೆಚ್ಚಾದುದನುಮೊಬ್ಬಾ ನಾಡಿಗಾ ವೈದ್ಯ ।
ಜಾಣತನದಿಂದರಿದುಮಿದಕಾ ।
ಪೀನ ಹಲಸಿನ ಪೋಳಿಗೆಯನುಂ ।
ಸಾನುರಾಗದಿ ಮಾಡಿ ತಿನಿಸಿರಿ ಮಾಯುವದುವೆಂದ ॥ ೨೦ ॥

ಆಗಳವರುಂ ಗೈರ ಹಂಗಾ ।
ಮಾಗಿಹುದರಿಂ ಸಿಗುವದಿಲ್ಲೆನೆ ।
ಯೋಗಿ ತಕ್ಷಣ ಪುಣೆಯೊಳಗಮವು ದೊರೆವವೆಂಶೆಂದು ।
ಪೋಗಿ ತರುವಾ ಕಾರ್ಯಮಾತ್ರಂ ।
ನಾಗನೂರಿನ ಗೂಳಪಗೆ ಸಾ ।
ಧ್ಯಾಗುತಿಪ್ಪುದವನನು ಕರಿಸುತೆ ವಿಧಿಸಿರೆನ್ನಲ್ಕೆ ॥ ೨೧ ॥

ವೇಗದಿಂದಲಿ ನಾಗನೂರಿಗೆ ।
ಪೋಗಿ ಗೂಳಪ್ಪನಿಗೆ ತಿಳಿಸಲ್ ।
ರಾಗದಿಂದವಬಂದುಮಜ್ಜಗೆ ನಮಿಸಿ ತರಲಿಕ್ಕೆ ॥
ಸಾಗಿದಂ ಪುಣೆಪುರಕಮಲ್ಲಿಯು ।
ಬಾಗವಾನೊಬ್ಬನಲಿ ದೊರೆತವು ।
ಬೇಗಮಲ್ಲಿಂ ಮೂರು ಹಲಸಿನ ಹಣ್ಣನುಂ ತಂದು ॥ ೨೨ ॥

ಯತಿಯ ಮುಂದಿಡೆ ನಕ್ಕುಮಿತನ ।
ಕೃತಿಯನುಂ ಬಲು ಪೊಗಳಿ ಬಳಿಕ ವಿ ।
ಹಿತಕರವು ಮೆಂದೆನಿಪೆರಡು ಹೋಳಿಗೆಯ ಮಾಡಿಸುತೆ ॥
ಅತಿಜವದಿ ತಿಂಬಲ್ಕೆ ಹುಣ್ಣಿನ ।
ವ್ಯಥೆಯು ಪಿಂದಕ ಸರಿಯುತಂ ಪರಿ ।
ಣತನು ಗುಣಮುಖವಾದನಾನಂದವದು ಸಂಭವಿಸಿ ॥ ೨೩ ॥

ಆಗ ಮುನಿಯೂನಂದ ಕುಂದಿಲ ।
ನಾಗಿ ಗೂಳಪ್ಪನಿಗೆ ನಿನ್ನಾ ।
ಪೋಷವಾದೆರಡು ಹಲಸಿನ ಪೋಳಿಗಿಗೆ ರೂಪಾಯಿ ॥
ಈಗಳೇಯಿಪ್ಪತ್ತು ಸಾವಿರ ।
ಬೀಗಿ ಕುಡ ಬೇಕೆಂದು ಮಾಡಿಹೆ ।
ಹೇಗೆ ಮಾಡಲಿ ನಾನು ಬಹು ಬಡ ಸಾಧುವೆಂತೆಂದ ॥ ೨೪ ॥

ಕರನಿಕರದಿ ನುಡಿಯಲ್ಕೆ ಗೂಳಪ ।
ಮುನಿಯೆ ನೀನದನನ್ನ ಬೇಡವು ।
ಪ್ರಣುತವಾದಾ ನಿನ್ನ ಕೃಪೆಯೊಂದಿರಲುಮದು ಸಾಕು ॥
ಕಣಿಕೆಯೊಳು ತಗೆನಷ್ಟು ರೊಕ್ಕವ ।
ನನಗೆ ಬೇಕಾಗಿರ್ಪ ಘನವನು ।
ಮನುದಿನವು ನೀನಿತ್ತು ಪೊರೆಯೈ ಸಿದ್ಧ ಶಿವಯೋಗಿ ॥ ೨೫ ॥

ಎಲವೊ ಗೂಳಪ ನಿನ್ನ ಸಾಲವ ।
ಸಲಿಸುವೆಂ ನಡುಗಡಲಿನೊಳಗುಂ ।
ತಿಳಿದುಕೋ ಯಿೂ ಸಾಧು ನುಡಿಯಂ ನಂಬುವಿದನೆಂದ ॥
ಕೆಲವು ದಿವಸದ ಮೇಲೆ ಗದಗಿನೊ ।
ಳಲಘುಮತಿ ವೀರಪ್ಪ ಮಾನ್ವಿಯ ।
ನಲಿವ ಮಾ ಶ್ರೀಮಂತನಿಪ್ಪತ್ತೆಂಟು ಸಾವಿರದ ॥ ೨೬ ॥

ಗೂಳಪನ ಮೇಲೊಂದು ಡಿಕ್ರಿಯ ।
ನಾಲಿಸದೆ ಹೂಡಿದನು ಬಾಂಬೆಯ ।
ಪೀಲಿನೊಳು ಹಾಯ್ಕೋರ್ಟುಮಿಪ್ಪತು ಸಾವಿರವ ಕಡೆದು ॥
ಲೀಲೆಯಿಂ ಬರಿಯೆಂಟು ಸಾವಿರ ।
ಹೇಳಿ ಕೊಡಿಸಿತು ಸಾಧುವಜ್ಜನ ।
ಪೇಳಿಕೆಯು ನಿಜವಾಯ್ತುಮಾತನೆ ಬಿಡಿಸಿದನುವೆಂದು ॥ ೨೭ ॥

ನುತಿಸಿದರು ಹೊಳಿಯಣ್ಣನವರುಂ ।
ಮಿತಿಯುಮಿಲ್ಲದ ಸುಖದಿ ಮುಳುಗುತೆ ।
ಯತಿವರನೆ ನಿನಗಾರು ಸರಿ ಈ ಭೂವಲಯುದೊಳಗೆ ।
ಜತೆಯು ಗೂಡುತೆ ನಮ್ಮ ಸಂಗಡ ।
ಗತಿಯನುಂ ತಂದಿಡುವೆ ಮುಂದೆಯು ।
ಮೃತಿ ಭಯವುಮೇನೆಮಗೆ ನಿನ್ನಂಥವರ ಬಲವಿರಲು ॥ ೨೮ ॥

ನಿನ್ನ ಪಾಂಡಿತ್ಯವನುಮಳೆವಾ ।
ಚನ್ನಿಗನದಾವನಿರುವನುಮಿೂ ।
ಭಿನ್ನತೆಯ ನೆರೆ ಸುಟ್ಟಭಿನ್ನತೆಯನ್ನು ನೆಲಗೊಳಿಪೆ ॥
ಅನ್ನದಾತನು ನೀನು ಭಕ್ತರ ।
ಬೆನ್ನಿಗಾಶ್ರಯ ನೀನು ಲೋಕವ ।
ತಣ್ಣಗಿರಿಸವ ನೀನು ನೀ ಧನ್ಯೆಂದು ಪೊಗಳಿದರು ॥ ೨೯ ॥

ಹೊನ್ನು ಮಣ್ಣುಗಳಾಸೆ ಮಾಳ್ಪವೆ ।
ನುಣ್ಣಲುಂ ನಾಂ ಕೇಳುತಿಪ್ಪೆನು ।
ಕಣ್ಣನುಂ ತೆರದೆನ್ನ ನೋಡುತಮಿವುಗಳಂ ಕೊಟ್ಟು ॥
ಧನ್ಯನಂ ಮಾಡೆಂದು ಕೇಳ್ದೊಡೆ ।
ಪುಣ್ಯ ಮಾಡವು ಬೇಡವೆಂದೀ ।
ತಣ್ಣಗಿರುವದನುಂ ತಿಳಿಸುವಾ ರುದ್ರ ರಕ್ಷಿಸಲಿ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ ಆಧುನಿಕ ಕವಿವರ್ಯ ಗುಡಿಸಾಗರ ಶ್ರೀಮದ
ತ್ಯಾಶ್ರಮಿೂ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೨೪ ನೇ ಅಧ್ಯಾಯ ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೭೩೧

## ೨೫ ನೇ ಅಧ್ಯಾಯ

**ಸೂಚನೆ :**

ಜ್ಞಾನಿಯಾದಾ ಸಾಧುವಜ್ಜನು ।
ಕ್ಷೋಣಿಯಂ ಪಾವಿತ್ರ್ಯಗೊಳಿಸುತ ।
ರೋಣದೊಳು ಲಿಂಗೈಕ್ಯವಾದುದನೊರೆವೆ ಭಕುತರಿಗೆ ॥ಪಲ್ಲ॥

ನಂಬಿಗಿಲ್ಲದ ಮನುಜರಿಗೆ ನೀ ।
ನಂಬಲಿಯು ಸಿಗದಂತೆ ಮಾಳ್ಪವೆ ।
ಕುಂಭಿನಿಯೊಳವರಂ ತಿರುಂಪೆಗೆ ಹಚ್ಚಿ ಕಾಡಲಿಹೆ ॥
ಡಿಂಭನಾದೆನ್ನಂತೆ ಮಾಡದೆ ।
ಸಂಬಳಿಸಿ ಶಿವಯೋಗದಾ ಸುಖ ।
ತುಂಬಿಯೆನ್ನನು ಪೊರೆಯ ಬೇಕೈ ಪಾರ್ವತೀಪತಿಯೆ ॥ ೧ ॥

ಕಾಳು ಕಡಿಗಳ ಪಟ್ಟೆ ಮಾಡಿಯೆ ।
ಸೂಳೆಯರ ಪೊಟ್ಟೆಂಗೆ ಪಾಕುವ ।
ಹಾಳು ಸ್ವಾಮಿಗಳವರ ಮುಖಮಂ ನೋಡ ಬಾರ್ದೆಂದು ॥
ನಾಲಿಗೆಯ ಸಡಿಲಿಟ್ಟು ಬೈಯ್ವವು ।
ಡಾಳ ಜನಮಂ ಕಂಡುಮುರಿಯದೆ ।
ಪಾಲಿಸವರಘಮರ್ಷಣನೆಯುಗ್ರಾಹ್ಯಮಂ ತೋರಿ ॥ ೨ ॥

ಭರದೆ ಹೊಳೆಯಾಲೂರಿಗೊಮ್ಮೆಯು ।
ಪರಮನೆಚ್ಚರಸ್ವಾಮಿ ಜಾತ್ರೆಯ ।
ಸುರಸ ಪ್ರಸ್ಥಕಮೆಂದು ತನ್ನಯ ಕಾರವನುಮೊಯ್ದು ॥
ಆರುಮೆಯಿಂ ಸಾರಿನೊಳು ಪಾಕಿಸಿ ।
ತಿರುವಿ ನೀಡಿಸೆಯೂಟದಾ ಜನ ।
ಸುರಿದು ಕೊಳ್ಳುತಮಹಹ ಸಾರಜ್ಜನದುಮೆಂದೆನುತೆ ॥ ೩ ॥

ಮೇಲೆ ಮೇಲೆಯು ತರಿಸಿ ಮುದದಿಂ ।
ದೇಳಲಿಕೆ ಬರವಂತೆಯುಂಬುವ ।
ಮೇಳದೊಳು ಕುಳಿತಿದ್ದ ನೀ ಗುಡಿಸಾಗರಾಧೀಶ ॥
ಲಾಲಸದ ನಾಯಿಗಳುಮಾಗಳ್ ।
ಗೋಳಿಡುತೆ ಕಡಿದಾಡಿಯೊತನ ।
ಮೇಲೆ ಬೀಳಲುಮೆಚ್ಚರಳಿವಪ್ಪಣೆಯನಿತ್ತೆಂದ ॥ ೪ ॥

ಊಟವಾದಾ ಬಳಿಕ ಗದ್ದುಗಿ ।
ಭೇಟಿಯಂ ಮಿಗೆ ಪಡೆದು ನಮಿಸುತೆ ।
ದಾಟ ಮಠಮಂ ಬೆಲ್ಲದವರಾ ಮನೆಗೆ ತಾಂ ಬಂದು ॥
ಗೂಟಕಂ ಹಸುವೆಯನು ಪಾಕುತ ।
ಕಾಟವಿಲ್ಲದೆ ಕುಳಿತುಕೊಂಡಿರೆ ।
ಮಾಟದಾಗೂಟವದು ಮುರಿಯುತ ಧೊಪ್ಪನೇ ಬೀಳೆ ॥ ೫ ॥

ಎಚ್ಚರಾಸ್ವಾಮಿಗಳುಮಿಲ್ಲಿಯು ।
ಮುಚ್ಚರಿಸಿದರು ಮರಣ ವಾರ್ತೆಯ ।
ಹೆಚ್ಚು ದಿನಗಳು ಬಾಳಲಾರೆನುಮಿನ್ನುಮೆಂತೆಂದು ॥
ಅಚ್ಚ ಸದ್ಗುರು ರುದ್ರ ದೇವನ ।
ಸ್ವಚ್ಛ ಗದ್ದುಗಿ ನೋಡಿ ಬಪ್ಪೆಂ ।
ದಿಚ್ಛೆಯಂ ಮಾಡುತ್ತಮಲ್ಲಿಂ ಪೊರಟ ಬನ್ನಟಿಗೆ ॥ ೬ ॥

ತುರಿತದಿಂ ಬರೆಯಲ್ಲಿ ಪಾವನ ।
ಗುರುವರನ ಗದ್ದುಗೆಯ ದರ್ಶನ ।
ಹರುಷದಿಂ ತಾಂ ಪಡೆದು ಪೊರಗಂ ಬಂದು ನಿಲ್ಲಲ್ಕೆ ॥
ಭರಭರನೆಯಲುಗಾಡಿಯೆದುರಿನ ।
ಮರದ ಟೊಂಗೆಯು ಮುರಿದು ಧೊಪ್ಪನೆ ।
ಯುರುಳಿ ಬೀಳಲು ರುದ್ರನುಂ ಕೊಟ್ಟಪ್ಪಣೆಯನೆಂದ ॥ ೭ ॥

ಕಡೆಗವಲ್ಲಿಯು ನಿಲ್ಲದಲ್ಲಿಂ ।
ದಡಗೆಡಹಿ ಗದ್ದುಗಿಗೆ ಬಳಿಕಂ ।
ನಡೆದು ಬಂದನು ಚಿಲ್ವ ಗುಡಿಸಾಗರದ ಗ್ರಾಮಕ್ಕೆ ॥
ಅಡಿಯ ಭಕ್ತರು ಕೂಡಿಯೊತನ ।
ಮುಡಿಗಿಯಿಲ್ಲಿಂದೆಲ್ಲಿಯುಂ ನೀಂ ।
ನಡೆಯಬಾರದುಮೆಂದುಮಡ್ಡೈಸಿದರು ಭಕ್ತಿಯೊಳು ॥ ೮ ॥

ಮುಪ್ಪಿನಲಿ ಸಂಚಾರ ತರವೇ ।
ತಪ್ಪದೇ ಮಠದೊಳಗಿರಲು ನೀ ।
ನ್ನಪ್ಪನುಂಡಾ ನಾವು ಸೇವಾ ಮಾಳ್ಪೆವೆಂತೆನ್ನೆ ॥
ಒಪ್ಪದೇ ಯೊನುಡಿಯನವರಿಗ ।
ಮಿಪ್ಪಯಿೊ ಪ್ರಾರಬ್ಧವೆಂದಿಗು ।
ತಪ್ಪದದರಿಂದಲೆವುದೇ ನನಗುಚಿತವೆಂತೆಂದ ॥ ೯ ॥

ಇತ್ತ ನಿತ್ಯವು ಶಾಸ್ತ್ರ ನಡಿಸುತ ।
ಮುತ್ತಿನಂಥಾ ಮಾತನವರಾ ।
ಚಿತ್ತಿನಲಿ ತುಂಬುತ್ತೆ ನಾಳೆ ಪ್ರಯಾಣ ಮಾಳ್ಪೆಂದು ॥
ಭಕ್ತರೆಲ್ಲರಿಗರುಪಿ ಮಠದಾ ।
ಸ್ತುತ್ಯ ಚಾಕರಿ ಮಾಳ್ಪುವದನುಂ ।
ಮತ್ತೆಮತ್ತೆಯು ತಿಳುಪಿ ರಾತ್ರಿಯೊಳೊರಗಿಕೊಂಡಿರಲು ॥ ೧೦ ॥

ಬೆಳಗಿನಾ ಜಾವದೊಳುವೊಂದುಂ ।
ಬಿಳಿಯ ಹಲ್ಲಿಯು ದಕ್ಷಿಣಕ್ಕೆಯು ।
ತಿಳುಪ ತೊಡಗಿತು ಮರಣಮಂ ಲೊಚ್ಚೆಂಬ ಸ್ವರದಿಂದೆ ॥
ಕುಳಿತು ಲಾಲಿಸಿಯಾಗಳಜ್ಜನು ।
ಮೆಲವೊ ಹಲ್ಲಿಯೆ ನೀನು ನನಗಿ ।
ನ್ನುಳಿಯಲಾರೆಯು ತಿರುಗಿ ಬರಲಾರಿಲ್ಲಿಗೆಂತೆಂಬೆ ॥ ೧೧ ॥

ಇಲ್ಲಿಯಾಗಲಿ ಯೆಲ್ಲಿಯಾಗಲಿ ।
ನಿಲ್ಲದುದ್ಯಮು ನಂದುಮೇನಿದೆ ।
ಬೆಲ್ಲದಂಥಾ ಸತಿ ಸುತಾದಿಗಳಿಹರುಮೇನಿಲ್ಲಿ ॥
ಮೆಲ್ಲ ಹುಗ್ಗಿಯ ಸುರಿದು ಕೊಳ್ವುದು ।
ಮಿಲ್ಲ ಯೆದ್ದೆನ ಜೋಗಿಯೆಂದೊಡೆ ।
ಚಲ್ವ ತಲೆ ಮೇಲೆಯೆ ಕಡಾವಿಗೆಯಂತೆ ಪೊರಟೆಂದ ॥ ೧೨ ॥

ಸತ್ತುಪೋಗುವದಿಲ್ಲವೀ ನುಡಿ ।
ಸ್ತುತ್ಯಕರ ಶರಣಾರ ಬಿಂದಕೆ ।
ಗೊತ್ತು ನಿನ್ನಂಥವರಿಗಿದು ತಿಳಿಯದಿಹುವೆಂದೆನುತೆ ॥
ಹೊತ್ತು ಮೀರದೆ ಚಕ್ಕಡಿಯೊಳಗ ।
ಮುತ್ತಮನು ತಾನೇರಿ ಕೂರ್ಪುತೆ ।
ಹತ್ತಿರದಯುರೆ ಹಳ್ಳಿಕೇರಿಗೆ ಬಂದ ನಲುವಿಂದೆ ॥ ೧೩ ॥

ಅಲ್ಲಿಯುಂ ಶೌಚಕ್ಕೆ ನಡದಿರೆ
ಹೊಲ್ಲ ಕಾಗೆಯುಮೊಂದು ಬಂದುಂ ।
ಚೆಲ್ವ ನೆತ್ತಿಯ ಮೇಲೆ ಕುಳಿತಿತು ಸೂಚಿಸಿತು ಸಾವ ॥
ಹೊಳ್ಳಿಯಲ್ಲಿಂದಜ್ಜ ಬೇಗನೆ ।
ನಿಲ್ಲದೇ ರೋಣಕ್ಕೆ ತಲ್ಪಿದ ।
ನಿಲ್ಲಿಯೇ ಮಠನಲ್ಲಿ ವಾಸಿಸ ಪತ್ತಿದಂ ಬಿಡದೆ ॥ ೧೪ ॥

ನಿತ್ಯ ಪೋಳಿಗಿಯುಂಡ ಕಾವಿಗ ।
ಮತ್ಯಧಿಕ ರೋಗವದೊದಗಲುಂ ।
ಸ್ತುತ್ಯ ದಾಸಾಚಾರಿಯೌಷಧವಿತ್ತನೀತಂಗೆ ॥
ಇತ್ತೊಡುಂ ಗುಣವಾಗದದಕುಂ ।
ಮತ್ತೆಯುರ್ಪಡು ಹೆಚ್ಚಿ ಟಬ್ಬನು ।
ಮೊತ್ತಿ ಮಾಡಿದ ರಾಮಲಿಂಗೇಶ್ವರನ ಕೆಕೆಯಲ್ಲಿ ॥ ೧೫ ॥

ಆದೊಡಂ ಗುಣವಾಗದೀ ಸಂ ।
ಪಾದಕನು ಗದದಿಂದಲತಿಶಯ ।
ಬಾಧೆಯಂ ಪೊಂದುತ್ತೆ ಜನ ಸಂಪರ್ಕಮಂ ತ್ಯಜಿಸಿ ॥
ಆದರದಿ ತನ್ನೊಳಗೆ ತಾನೆ ಸ ।
ಮಾಧಿಯಂ ಗೈಯುತ್ತಲಿರ್ದಾ ।
ವ್ಯಾಧಿ ಬಾಧೆಯ ಮರೆತನುಂ ಸೆಜ್ಜಾರದಲಿ ಕುಳಿತು ॥ ೧೬ ॥

ಇತ್ತ ಭಕ್ತರು ಜಡ್ಡು ಜೋರಿದೆ ।
ಯೊತ್ತರದಿ ಬರಬೇಕುವೆಂಬುತೆ ।
ಸುತ್ತಲುಂ ತಿಳುಪಲ್ಕೆ ಜನ ಕೂಡೆ ಹೊಡೆದುವೈಯ್ತಂದು ॥
ಸತ್ಯನಂ ಕಂಡಲುಃಗಲಾಗಿವ ।
ಕಿತ್ತು ದೃಷ್ಟಿಯ ಪೊರಗೆ ತಾರದೆ ।
ಯೊತ್ತಿ ಪಾವನ ಬ್ರಹ್ಮರಂಧ್ರದಿ ಬಿಟ್ಟ ಪ್ರಾಣವನು ॥ ೧೭ ॥

ಧಿಟ್ಟನುಂ ಗುರುವಾರ ಬೆಳಗಿಗೆ ।
ಬಿಟ್ಟದೇಹವ ನೋಡಿ ಭಕ್ತರು ।
ಶ್ರೇಷ್ಠವಾದಾ ಜಯ ನಮಃ ಪಾರ್ವತಿಪತಿಯೆಯೆಂದು ॥
ಉಟ್ಟ ಶಬ್ದದಿಯರಚಿ ದೇವ್ತರು ।
ಜಟ್ಟನೇ ತಾವ್ ಕಲ್ಪವೃಕ್ಷದ ।
ಬಟ್ಟ ಹೂವಿನ ಗುಚ್ಛಮಂ ಬಲ್ಸುರಿಸಿ ಬಿಟ್ಟರಲಾ ॥ ೧೮ ॥

ಅಂದು ತೇದಿಪ್ಪತ್ತರೊಂಭತು ।
ಮುಂದೆ ತಿಂಗಳುಮೇಳುವಿುಶ್ವಿಯು ।
ಸಂದ ಹತ್ತೊಂಭತ್ತುನೂರಾಯಿಪ್ಪತಾರಿರಲು ॥
ಹಿಂದು ಶಕೆ ಹದಿನೆಂಟ ನೂರಾ।
ಚಂದ ನಾಲ್ವತ್ತಾರು ಗ್ರೀಷ್ಮವು ।
ಪೊಂದಿ ಸಂವತ್ಸರವು ಕ್ರೋಧವು ದಕ್ಷಿಣಾಯಣವು ॥ ೧೯ ॥

ಮತ್ತೆ ಮಾಸಾಷಾಢ ಪಕ್ಷವು।
ಸ್ತುತ್ಯಕೃಷ್ಣವು ತಿಥಿಯು ದ್ವಾದಶಿ ।
ಯಿತ್ತಮೆಲ್ಲಾ ಕಾಲ ಸರಿಯಿರೆ ಸ್ನಾನಮಂ ಗೈಸಿ ॥
ಉತ್ತಮಾಂಗನ ಕೂಡ್ರಿಸುತ್ತಂ ।
ಕತ್ತಿನಲಿ ಪೂಮಾಲೆ ಸರಮಂ ।
ನೆತ್ತಿ ಮೇಲೆಯು ಮುಕುಟಮಂ ಪಾಕುತ್ತೆ ಜರಿ ವಸ್ತ್ರ ॥ ೨೦ ॥

ಹೊದಿಸಿ ಭಸ್ಮವ ಬಳೆದು ಗಂಧದ ।
ವೃದುಲ ಬಟ್ಟೆನುಮಿಟ್ಟು ಫಣೆಯೊಳು ।
ಮಧಿಕೃತಗೆ ರುದ್ರಾಕ್ಷಿ ಧರಿಸುತ ಮಲ್ಲಿಗೆಯ ಮುಡಿಸಿ ॥
ವದನದೊಳು ಮಾಮಂತ್ರ ನುಡಿಯುತೆ ।
ವಿಧವಿಧದೊಳಂ ಪಾದ ಪೂಜೆಯು
ನೊದವಿ ಮಾಡುತಮಿತ್ತಮಿೂ ಮಿಗೆ ಮರಣ ವಾರ್ತೆಯನು ॥೨೧॥

ವರ್ತಮಾನದ ಪತ್ರಿಕೆಯೊಳಂ ।
ಕರ್ತನಳಿದುದು ಕೊಟ್ಟಕೂಡಲೆ ।
ಗುರ್ತಿಸುತ ನಿಜ ಭಕ್ತರೆಲ್ಲರು ಬಂದು ಮಠದೊಳಗೆ ॥
ಭರ್ತಿಯಾಗುತ ನೋಡಿ ಸದ್ಗುರು ।
ಮೂರ್ತಿಯಂ ಕಣ್ಣೀರು ಸುರಿಸುತ ।
ಮಾರ್ತೆಯಿಂದಲಿ ಬಿದ್ದು ಮುರುಳಾಡಿದರು ನೆಲದೊಳಗೆ ॥ ೨೨ ॥

ಕೆಲವರಲ್ಲಿಯೆ ಮೂರ್ಛೆ ಪೋದರು ।
ಹಲವರುಂ ಬಳಿ ಕಂಭ ಹಾಯ್ದರು ।
ಕೆಲವರುಂ ಪಾದವನು ಪಿಡಿಯುತ ಬಿಕ್ಕಿ ಬಿಕ್ಕಳುತ ॥
ಎಳೆಯ ಬಾಲರನೆಮ್ಮನುಂ ನೀಂ ।
ಸಲಹುವದನುಂ ಬಿಟ್ಟು ಮಾಯೆಯ ।
ಕೊಲೆಗೆ ಗುರಿ ಮಾಡುತ್ತ ಪೋದೆಯೊ ಮೆಂದು ವಚಿಸಿದರು ॥ ೨೩ ॥

ನಮ್ಮ ತೇರಿನ ಕಳಸ ಮುರಿಯಿತೆ ।
ನಮ್ಮ ಯರಗಿಳಿಯಿಂಚರಡಗಿತೆ ।
ಬ್ರಹ್ಮವೇ ತಾನಾದ ಕವಿ ಕೋಕಿಲೆಯು ಕಡೆಗಾಯ್ತೆ ।
ರಮ್ಯ ನಿಲುಗನ್ನಡಿಯುಮೊಡೆಯಿತೆ ।
ಸಮ್ಮುಖದಿ ಸಿರಿ ರತ್ನ ಕರಗಿತೆ ।
ಸಮ್ಮುದದ ಹೊಳೆ ಹರಿಯುವದು ಕಟ್ಟಾಯಿತೇ ಯಿನ್ನು ॥ ೨೪ ॥

ಮೆರೆವ ಸ್ವರ್ಣ ತುರಾಯಿ ಕಳಚಿತೆ ।
ಮರಣವಾಯಿತೆ ಅಭ್ರಮಣಿಗೆ ಸ ।
ದ್ಗುರುವು ಪಿಡಿಯುವ ರಾಜ ಗೊಂಡೆಯು ಹರಿಯಿತೇ ಯಿಂದು ॥
ಅರುವಿನಾ ನಡು ಗಂಭ ಮುರಿಯಿತೆ ।
ಶರಣರಾ ಪೂಮಾಲೆಯುದುರಿತೆ ।
ಧರೆಯೊಳಗೆ ಹಾರಾಡುತಿರ್ಪ ನಿಶಾನಿ ತುಂಡಾಯ್ತೆ ॥ ೨೫ ॥

ಕುರಿಯ ಬುದ್ಧಿಯ ನಮ್ಮನೆಲ್ಲರ ।
ಹುರಿಗೊಳಿಸಿ ಸಂಸಾರಮಂ ನೀಂ ।
ತೊರೆಸಿ ಶಿವಯೋಗಾದಿ ರುಚಿಯಂ ತಿಳಿಸಿ ನಿಲ್ಲಿಸುತೆ ।
ಅರಿಗಳಾರನು ಬಗ್ಗು ಬಡಿಸುತೆ ।
ಹರಿವ ಮನಮಂ ಬಿಡಿಸಿದಾ ತವ ।
ಮರೆವುದೆಂತುಪಕಾರಮಂ ಮಿಗೆ ಸ್ಮರಿಸಿಯತ್ತರಲಾ ॥ ೨೬ ॥

ಯಾರೊ ಯೆದೆಯಂ ಬಡೆದುಕೊಂಡುಂ ।
ಯಾರೊ ಹಣೆಯಂ ಘಟ್ಟಿಸುತ್ತಂ ।
ಯಾರೊ ಚೀರುತೆ ಲಬ್ಬೆಯಂ ಕುಟ್ಟುತ್ತೆ ಬೋರಾಡಿ ॥
ಭೂರಿ ಕಣ್ಣೀರಿಟ್ಟಳುವದಾ ।
ಪೂರ ಖಗಮೃಗ ವೃಕ್ಷ ಶಿಲೆಗಳು ।
ಸಾರಿ ನೋಡುತೆ ಮರುಗುತಿದ್ದವು ಕರಗುತಿದ್ದವಲಾ ॥ ೨೭ ॥

ಬಳಿಕ ಸದ್ಗುರುನಾಥನಂ ಪೂ ।
ಗಳ ರಥದಿ ಕೂರ್ಸಿಸುತೆ ಮೆರಸುತೆ !
ಬಳಿಯು ಪೂತ ಸಮಾಧಿಗೈತಂದಿಟ್ಟು ಕಳೆಬರವ।
ನಿಲವೆ ಪೂಜಿಸಿ ಶುದ್ಧ ಭಸ್ಮದ ।
ಬಿಳಿಯು ಪುಡಿಯೊಳು ನಾಣ್ಯದೊಂದಿಗ ।
ಮಳುತಳುತಮಿರಿಸಿದರು ಭಕ್ತರು ಜಯು ನಮಃವೆಂದು ॥ ೨೮ ॥

ಮಂಗಲಂ ಗುಡಿಸಾಗರೀಶಾ ।
ಮಂಗಲಂ ಸುಜ್ಞಾನ ಕೋಶಾ !
ಮಂಗಲಂ ಗುರು ತಿಲಕನೇ ನೀ ಸತ್ಯ ಜಗದೀಶಾ ॥
ಮಂಗಲಂ ವಿಭ್ರಮ ವಿನಾಶಾ ।
ಮಂಗಲಂ ನಿರ್ಮಳ ನಿರಾಶಾ ।
ಮಂಗಲಂ ಜಯು ಮಂಗಲಂ ಪರಬ್ರಹ್ಮ ಪರಮೇಶಾ ॥ ೨೯ ॥

ಮಂಗಳಾಗಲಿ ಹೇಳ್ವ ಕೇಳ್ವಗೆ ।
ಮಂಗಳಾಗಲಿ ಪೂಜೆ ಮಾಳ್ಪಗೆ ।
ಮಂಗಳಾಗಲಿ ನಿರುತವೀ ಪೌರಾಣವೋದವಗೆ ॥
ಮಂಗಳಾಗಲಿ ಪ್ರಚುರ ಪಡಿಪಗೆ ।
ಮಂಗಳಾಗಲಿ ಬರೆದ ಪುರುಷಗೆ ।
ಮಂಗಳಾಗಲಿ ಸಾಧುವಜ್ಜನ ಪೂಜ್ಯ ಪಾದಕ್ಕೆ ॥ ೩೦ ॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ।
ಸಂಸಾರ ಮಕರ ನಿಕರ ನಿಕೃಂತ ನಿಜ ಧೈರ್ಯ ಜಿಜ್ಞಾಸು ।
ಸಂಪೂಜಿತಾ ಪಾದ ಮಾಧುರ್ಯ । ಆಧುನಿಕ ಕವಿವರ್ಯ ಗುಡಿಸಾಗರಶ್ರೀಮದ
ತ್ಯಾಶ್ರಮಿ ಸಿದ್ಧ ಸಾಧು ಶಿವಯೋಗಿಗಳವರ ವರ ಪುರಾಣ
ದಲ್ಲಿ ೨೫ನೇ ಅಧ್ಯಾಯವು ಮುಗಿದುದು ॥

— ಶುಭಃ —

ಒಟ್ಟು ನುಡಿಗಳು ೭೬೧

# ಶಬ್ದಕೋಶ

## ಅ

ಅಂಗಯಿಸು- ಸೆರೆ ಸೇರು
ಅಂಗವಣೆ–ಇಚ್ಛೆ
ಅಂಗವಿಸು–ಕೂಡು
ಅಂಡಿಸು–ಸಮೀಪಿಸು
ಅಂತರಿಸು–ತಡಮಾಡು
ಅಖಿಲಾಂಕ–ಪರಮೇಶ್ವರ
ಅಗಿರಲೋಕ–ಸ್ವರ್ಗಲೋಕ
ಅಘಮರ್ಷಣ–ಹೊಟ್ಟೆಕಿಚ್ಚುಯಿಲ್ಲದ
ಅಜಕು–ಹೆದರು ಅಂಜು
ಅಜ್ಜು–ತೋಯಿಸು
ಅಟಮಟ–ಮೋಸ
ಅಡಗಣಿಸು–ತಡೆನಿಲ್ಲು
ಅಡರ್ಪ–ಗುಂಪು
ಅಡಬೆ–ಕ್ರೂರತನ
ಅಡಲು–ಹೆದರು
ಅಡಾಯಿಸು–ಅಡ್ಡಿಮಾಡು
ಅಡಿಕೆಡು–ಬಹಳ ಅಂಜು
ಅಡಿಯ–ಸೇವಕ
ಅಣಿಯರ–ಅತಿಶಯತೆ
ಅಣುಗು–ಪ್ರೀತಿ
ಅಣುಗೆ–ಹುಡಿಗೆ
ಅತ್ತಳಗ–ನೋವು ವ್ಯಥೆ
ಅತ್ಯುಪಧ–ವಿಶ್ವಾಸಕ್ಕೆ ತಕ್ಕ
ಅದಕುಳಿ–ಸಂತೋಷ ಸುಖ
ಅದವಳಲು–ಸಂತಾಪ
ಅಧಟ–ಶೂರತನ
ಅಧಿನಾಥ–ಒಡೆಯ
ಅನಡ್ವ–ಹೋರಿ ಎತ್ತು
ಅನ್ವಿತ–ಕೂಡಿಕೊಂಡಿರುವವ
ಅನಿವ–ಬಲತ್ಕಾರ
ಅನೇಕಪ–ಆನೆ
ಅಪಚಯ–ಕ್ಷೀಣತೆ
ಅಭಿಲಸತೆ–ಇಚ್ಛೆ
ಅಭಿಹಾರ–ಸೆರೆಹಿಡಿಯುವಿಕೆ
ಅಮರ್ಚು–ಒತ್ತಿಸೇರಿಸು
ಅರವಳಿಯ–ನೀತಿವಂತ
ಅಠವರಿಸು–ತಡಮಾಡದಿರು
ಅರಿಮೆ–ತಿಳುವಳಿಕೆ
ಅರುಮೆ–ಪ್ರೀತಿ
ಅರೆವರಿಸು–ಕೈಬಿಡುವುದು
ಅಲರಿಜ–ಬ್ರಹ್ಮ
ಅಲವ–ಬಹಳ
ಅಲವರಲು–ಆಸೆಪಡು
ಅಲ್ಲಣಿಕೆ–ಹಾಸ್ಯ ವಿನೋದ
ಅಲ್ಲರಿ–ಪೀಡೆ ನೋವು
ಅಲ್ಲವರ್_ಅಕಸ್ಮಾತ್
ಅವಗತಿ–ಜ್ಞಾನ
ಅವಚರು–ತಿರಸ್ಕರಿಸು ಹೇಸು
ಅಸಕಳಿ–ಹದ್ದುಮೀರು ಅತಿಕ್ರಮಿಸು
ಅಸವರ–ಬೇಗ
ಅಸವಳಿ–ಬೇಸರಪಡು
ಅಸ್ತಿವಾರ–ತಳಹದಿ
ಅಳ್ಳಜ–ಪ್ರೀತಿ

ಅಳ್ಕರ- ಪ್ರೀತಿ
ಅಳಿಪು–ದುರಾಸೆ
ಅಳುಗು–ಪ್ರೀತಿ

ಆ

ಆಗಡ–ಅಣಕ, ವಿನೋದ
ಆಗಸಿ–ಅಪರಾಧಿ
ಆಣಕ–ಹೀನ
ಆತಪನ–ಶಿವ
ಆಯತಿ–ವಿಸ್ತರ
ಆಯತಿಕೆ–ವೈಭವ
ಆರಡಿವೆದೆಯ–ಕಾಮ
ಆರವಾರ ದೊಡ್ಡಗದ್ದಲ
ಆರೆಕಾರ–ಸಾಕಿದವ
ಆವಿಲ–ನಿರ್ಮಳವಿಲ್ಲದ
ಆವುಕ–ತಂದೆ
ಆಳವಾಡು–ನಿಂದೆಯಾಡು
ಆಳಿಕಾರ–ಮನೆತನಸ್ಥವಂಶಸ್ಥ

ಇ

ಇಮ್ಮಿಡ–ಸೊಗಸುಗಾರ

ಈ

ಈರ್ದು–ಜಗ್ಗಿ

ಉ

ಉಚಾಯಿಸು–ಮೀರುದಾಟು
ಉಣ್ಮು–ಹುಟ್ಟು
ಉತ್ಕಟಿಸು–ಮಿತಿಮೀರು
ಉತ್ಕರ–ಅತಿಶಯತೆಸಮೂಹ
ಉತ್ಕಲಿಕೆ–ಉತ್ಸುಕತೆ
ಉತ್ಸಾದನ–ನಾಶಮಾಡುವಿಕೆ
ಉತ್ಸಿಕ್ತತೆ–ಎಲ್ಲೆ ಮೀರಿದ ಉದ್ಧತ
ಉದಕ್ಯೆ–ಮುಟ್ಟಿನಸ್ತ್ರೀ
ಉದ್ವಹ–ಸಂತೋಷ
ಉಪ್ಪವಡಿಸು–ಎಚ್ಚರವಾಗು
ಉಮ್ಮಗೆ–ಸುಮ್ಮನೆ
ಉಮ್ಮಳಿಸು–ವ್ಯಥೆಪಡು
ಉರುಮಿಕೆ–ಆಧಿಕ್ಯ
ಉಲುಗು–ಮೆಚ್ಚು
ಉಲ್ಪುದುಕ–ಬಿಸಿನೀರು
ಉಲುಪು–ಶಬ್ದ ಧ್ವನಿ
ಉಳುಗು–ಮೆಚ್ಚು

ಊ

ಊಡುಕರ–ಉಡಾಳ

ಎ

ಎರಕಿಲು–ಮಾಳಿಗೆ

ಏ

ಏರುಗಡೆ–ಪ್ರಗತಿ
ಏರಲಿಕ್ಕು–ಆಸನಹಾಕು ಗದ್ದಿಗೆಹಾಕು
ಏವಿಸು–ಹೇವಮಾಡು
ಏಸಾಡು–ಬೀಸಾಡು

ಐ

ಐದೆ–ಚನ್ನಾಗಿ

ಒ

ಒಚ್ಚನೆ–ಅಚ್ಚುಕಟ್ಟಾಗಿ
ಒಡರ್ಚು–ಮಾಡು

ಒಡರ್ಪು–ಉಂಟಾಗು
ಒಳವು–ಉಂಟು
ಒಳಹು–ಸೊಗಸು
ಒಳ್ಳೋಜ–ಸದ್ಗುರು

ಓ

ಓಗಡಿಸು–ಹೇಸಿಕೊಳ್ಳು
ಓಜೆ–ಕ್ರಮ
ಓತು–ಪ್ರೀತಿಸು
ಓಲಗಿಸು–ಸೇವೆಮಾಡು
ಓಲು–ಬಾಗು
ಓಸರಿಸು–ತೆಗೆದುಹಾಕು

ಔ

ಔಡ–ತುಟಿ

ಕ

ಕಂಕತ–ಬಾಚಣಿಕೆ
ಕಟ್ಟೆಯಿಸು–ಆಲಿಂಗಿಸು
ಕಡಪು–ಉತ್ಸಾಹ
ಕಡಲಿಡು–ಅಧಿಕವಾಗಿಸ್ರವಿಸುಸೋರು
ಕಡವರ–ಆರ್ತಧ್ವನಿ
ಕಣ ೧- ಕುದುರೆ
ಕದಬು–ಸಂತೋಷಪಡಿಸು
ಕರ್ದಮ- ಪಾಪದಕೆಲಸ
ಕನವನಿಪ- ಭೀಕರ
ಕನಿ–ಪ್ರಕಾಶ
ಕಮನ- ಚಲುವ
ಕಲಹಾರ–ಜಗಳ
ಕವುಂಕ- ಬಗಲು
ಕವುಳುಡೆ- ತೆಕ್ಕೆ
ಕಶೆ–ಕೋರ್ಡಾ
ಕಳಿವರಿ—ಮಿತಿಮೀರಿ
ಕಳ್ಳುಕುಡಿ—ಸೆರೆಕುಡಿ

ಕಾ

ಕಾಣ್ಮೆ—ಶೌರ್ಯ
ಕಾಲ್ಗೆಡು—ಹೆದರು
ಕಾವರ—ಕೋಪ

ಕು

ಕುಟ್ಟಾನ—ಬೈಯ್ಯುವದು
ಕುಬಿಬಿಕ್ಕು-ಮನಬಂದಂತೆಅರಿಚಿಕೊಳ್ಳುವದು
ಕುಸುಕು—ಕುಕ್ಕು

ಕೆ

ಕೆದಕು—ಕೆರೆ ಪರಚು
ಕೆಲಪಾಯ್ದು—ಒಂದುಬದಿಕೆಹೋಗು
ಕೆಲ್ಲಯಿಸು—ಸಿಟ್ಟಾಗು

ಕೈ

ಕೈಪರೆ—ಚಪ್ಪಾಳಿಬಾರಿಸು
ಕೈರವಿ—ಬೆಳದಿಂಗಳು

ಕೊ

ಕೊಂಡುಕೊನೆ—ಹೊಗಳು
ಕೊಪ್ಪರಿಸು—ಹೊಡೆಬಡೆ

ಕೋ

ಕೋಡಿಗೆಳೆ—ನಿರಾಕರಿಸು
ಕೋಡಿಡು—ಶ್ರೇಷ್ಠ
ಕೋಳ್ದಾಟು—ಅತಿವೇಗವಾಗಿದಾಟು

ಕೋಳ್ಗೊಳ್ಳು — ವೈರತ್ವವನ್ನು ತಾಳ್ದು

ಖ

ಖಂಡಿಕ — ಸೇಂಗಾ

ಗ

ಗಂತ್ರೀ — ಸ್ತ್ರೀಸಂಯೋಗ

ಗಂಧನ — ಸಂತೋಷ

ಗನ್ನದಂಕ — ಕಪಟಿ

ಗರ್ವಾಟ — ಬಾಗಿಲಕಾಯುವವ

ಗಳಗಳನೆ — ಬೇಗನೆ

ಗಳಿಪು – ಹರಟೆಹೊಡೆ

ಗು

ಗುಳಿ — ಕೆರೆ

ಗೆ

ಗೇಹ — ಮನೆ

ಗೊ

ಗೊಣಗ — ಚಾಡಿಕೋರ

ಗೋ

ಗೋಂಟು — ಕೋಣೆ

ಚ

ಚಚ್ಚರ — ವೇಗ

ಚಯ — ಗುಂಪು

ಚಾ

ಚಾಟು — ಪ್ರಿಯಕರವಾದಗಳು

ಚಾಪಟೆಯ — ಮೋಸಗಾರ

ಚು

ಚುನ್ನ — ನಿಂದೆ

ಚೇ

ಚೇಗು - ಗಟ್ಟಿತನ

ಚೋ

ಚೋಚ — ತೊಗಲು

ಜ

ಜಂಕಿಸು — ಬೆದರಿಹು

ಜು

ಜುಕುತಿಕ — ಯುಕ್ತಿಗಾರ

ಡ

ಡಾವರ — ತಾಪ

ಡೊಂಬು — ಹೆಮ್ಮೆ

ಡೋಣಿ — ತಗ್ಗು

ಡೋಣೆಯ — ದಾಂಡಿಗ ಅಸಂಸ್ಕೃತ

ತ

ತಡಪು — ಆತಂಕ

ತಣಲು — ಉರಿಯುವಕೆಂಡ

ತತ್ತು — ಸಂಬಂಧಿಸಿದ

ತತ್ತಳ — ಅಂಜಿಕೆ

ತಲ್ಲಜ — ಸುಖ

ತಿ

ತಿಟ್ಟನೆ — ಅವಸರವಸರ

ತಿಟ್ಟು — ಬೈಯ್ಯು

ತು

ತುಟಾರ — ಅವಿಚಾರ

ತೆ

ತೆಣರು — ನರಳು

ತೆತ್ತಿಸು—ಹತ್ತಿರಕ್ಕೆತರು ಒಳಹೊಗಿಸು
ತೆತ್ತು—ಕೊಟ್ಟು

ತೆ

ತೇರೈಸು—ಗುಂಪುಗೂಡು
ತೊನೆ—ಅಲ್ಲಾಡು
ತೋರ—ದಪ್ಪವಾದ

ದ

ದುವಾಳಿಸು—ತ್ವರೆಯಿಂದೆಮುಂದು ವರೆಯು

ಧ

ಧಮ್ಮಿಲಳು—ಜಡೆಯುಳ್ಳವಳು

ನ

ನಂದೆ—ಏಕಾದಶಿ ಪಾರ್ವತಿ
ನಮಸ್ಯೆ—ಸೇವೆ
ನರಡು—ಒರಟುತನ
ನಲ್ವರಕೆ—ದೊಡ್ಡಆಶಿರ್ವಾದ
ನಲ್ಗುಟುಕು—ಸವಿತುತ್ತು

ನಿ

ನಿಗ್ಗಡಿ—ನಾಚಿಕೆಗೇಡಿ
ನಿಯೋಗಿಸು—ಸೇರಿಸು
ನಿರತ್ಯಯ—ನಾಶವಿಲ್ಲದ ಮೋಕ್ಷ
ನಿಶಾರ—ಗುಡಾರ

ನೀ

ನೀಂಟಿಸು—ನೋಡು
ನೀರಂಧ್ರ—ದಟ್ಟವಾದ
ನೀರೇರಿಸು-ಸಂತೋಷವನ್ನುಂಟು ಮಾಡು
ನೀಳ—ಉದ್ದ
ನೀಳ್ಕೊಳು—ತಿರುಗಾಡು

ನೆ

ನೆಮ್ಮು—ಆದರಿಸುನಮಸ್ಕರಿಸು
ನೇಗಹು—ಇಡು ಸೇರಿಸು

ನೈ

ನೈರ್ಘೃಣ್ಯ ಕ್ರೂರತನ

ನೋ

ನೋಂಪು—ಭಕ್ತಿವ್ರತ

ಪ

ಪಂಟ—ಊಟ
ಪಡಿಪುಚ್ಚ—ಸಂದೇಹ ಸಂಶಯ
ಪದಿಟಿ—ಗೌರವ ಹೆಮ್ಮೆ
ಪದುಗ—ಬಾಗು
ಪದೆಪು—ಮೆಚ್ಚು
ಪದೆ—ಮೆಚ್ಚು
ಪಳವೆ—ಹಳೆಯಕಥೆ
ಪ್ರಮೇಯ—ತೊಡಕಿನಪ್ರಸಂಗ

ಪೆ

ಪೇರಣಿ—ಕುಣಿತ

ಪೊ

ಪೊಣರ್ಚು—ಸೇರಿಸು
ಒಳ್ವಳ—ಹೆಚ್ಚಾಗಿ ಅಧಿಕ
ಬಳ್ಕುಡಿ—ಭೀತಿ
ಬಳ್ಕುಗೆಡೆ ಅತ್ತಿತ್ತ ಸರಿದಾಡು

ಬಾ

ಬಾಕುಡ—ಗಂಡ

| | |
|---|---|
| **ಬ** | **ರ** |
| ಬಿಡೆನೋಡು ಚನ್ನಾಗಿನೋಡು | ರಚ್ಚೆ—ಒದರಾಟ |
| **ಬಿ** | ರುಳಿ—ಗೆಜ್ಜೆ |
| ಬೀಗು—ಸಂತೋಷಪಡು | ಲುಲಾಯಿ—ಎಮ್ಮೆ |
| ಬೀರು-ಚಲ್ಲು | ವಾವೆ—ಪ್ರೇಮ |
| **ಬೆ** | ವೆಂಟಣಿಸು—ಸುತ್ತುವರಿ |
| ಬೆರಟು—ಚಿವಟು | ವೇಡಯಿಸು—ಪಡೆಹೊಂದು |
| ಬೆದರು—ಕುಕ್ಕು | ಸಳೇಹ—ಶತ್ರು |
| ಬೆಸ—ಸೇವೆ | ಸೀವರಿಸು—ಅಸಹ್ಯತೋರು |
| **ಬೊ** | ಸೆಗಳೆ—ಸಂತಾಪ |
| ಬೊಂದಿ—ಶರೀರ | ಸೇದ್ಯ—ಒಕ್ಕಲುತನ |
| **ಮ** | ಸೋನೆ—ಮಳೆ |
| ಮನಾಯಿ—ಅಡ್ಡಿ | ಪಪ್ಪುಕಳ—ರಣಹದ್ದು |
| ಮಲ್ಲಣಿ—ವ್ಯಥೆದುಃಖ | ಹಳ್ಳೂವರ—ಕೋಮಲತೆ |
| **ಮು** | ಹೀರ—ಸಿಂಹ |
| ಮುಡುಗು—ಅಪ್ಪಿಕೊಂಡು | ಹೇಗತನ—ಮರುಳತನ |
| ಮುಲುಕು—ನರಳು | ಹೇನ—ಸ್ತ್ರೀ ಚೇಷ್ಟೆ |

## — ಮಂಗಳಾರತಿ —

ಆರತಿ ಬೆಳಗಿರಿ ಸಾಧು ಶಿವಯೋಗಿಗೆ। ಧರುಣಿಯೊಳು ಮೆರೆದ।
ಮಾ ರಾಜಭೋಗಿಗೆ ॥ ಪ॥

ಮಾರ ಸಂಹಾರಗೆ। ಸಾರ ಸಂಗೀತಗೆ। ಧೀರ ಸದ್ಗುರುವಾದ
ಶಿವನವತಾರಿಗೆ ॥ ೧॥

ಅದ್ರಿಯವಾಸಗೆ ಭದ್ರ ಸಮೇತಗೆ। ಮುದ್ರೆಯ ನೊತ್ತಿದ
ರುದ್ರರ ಶಿಶುವಿಗೆ। ॥ ೨॥

ಗುಡಿಸಾಗರೀಶಗೆ। ಕಡುಉಪದೇಶಿಗೆ। ಕಡೆಯೊಳು ರೋಣದಿ
ಮಡಿದ ಮಹಾದೇವಗೆ ॥ ೩॥

